CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೭, ೨೦೦೫ (ಕಾರ್ತಿಕ ೫, ಶಕ ವರ್ಷ ೧೯೨೭) | ಸಂಚಿಕೆ ೪೨ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ದಿನಾಂಕ: 1–4–2000 ರಂದು ತೋಟಗಾರಿಕೆ ಇಲಾಖೆಯಲ್ಲಿ ವಿವಿಧ ವೃಂದಗಳಲ್ಲಿ ಖಾಲಿ ಇದ್ದ ಹುದ್ದೆಗಳ ಪೈಕಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ:ಸಿಆಸುಇ 6 ಈಕಾಅ 2003 ದಿನಾಂಕ:23–9–2003.
2) ಅ.ಟಿ.ಸಂ.ಸಿಆಸುಇ 1 ಈಕಾಅ 2005 ದಿನಾಂಕ:6–1–2005.
3) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಅ.ಸ.ಪತ್ರ ಸಂ:ತೋಇ/ಆ/ಸಿ/ವಿನಿ7/63/96–97 ದಿನಾಂಕ:22–1–2005 ಹಾಗೂ 1–2–2005.
4) ದಿನಾಂಕ:3–2–2005 ಮತ್ತು ದಿನಾಂಕ:9–3–2005 ಹಾಗೂ ದಿನಾಂಕ:3–6–2005 ರಂದು ಅಪರ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆಸಲಾದ ಅಧಿಕಾರಯುತ ಸಮಿತಿ ಸಭೆಯ ನಡವಳಿ ಸಂ:ಸಿಆಸುಇ 11 ಈಕಾಅ 2005 ದಿನಾಂಕ: 13–6–2005.
5) ಸರ್ಕಾರದ ಸುತ್ತೋಲೆ ಸಂ.ಸಿಆಸುಇ 137 ಈಕಾಅ 2005 ದಿನಾಂಕ:26–7–2005.
6) ಅ.ಟಿ.ಸಂಖ್ಯೆ:ಸಿಆಸುಇ 11 ಈಕಾಅ 2005 ದಿನಾಂಕ:9–8–2005.

**ಪ್ರಸ್ತಾವನೆ:**

1. ದಿನಾಂಕ:1–4–2000 ರಂದು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸುವ ಸಲುವಾಗಿ ಮೇಲೆ ಓದಲಾದ (1)ರ ಆದೇಶದ ದಿನಾಂಕ: 23–9–2003 ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ಅಧಿಕಾರಯುತ ಸಮಿತಿಯನ್ನು ರಚಿಸಲಾಗಿತ್ತು. ಈ ಸಮಿತಿಯು ದಿನಾಂಕ: 1–4–2000 ರಂದು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿಯಿರುವ ಹುದ್ದೆಗಳ ಪೈಕಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ ಇಲಾಖೆಗಳು ಪರಿಶೀಲಿಸಿ ಕ್ರಮ ಕೈಗೊಳ್ಳಲು ಸೂಚಿಸಲಾಗಿದ್ದಿತ್ತು. ಅಲ್ಲದೇ ಮೇಲೆ ಓದಲಾದ (2)ರ ಸರ್ಕಾರದ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಗಳ ಪೈಕಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸಲು ತೆಗೆದುಕೊಂಡಿರುವ ಕ್ರಮದ ಬಗ್ಗೆ ಮಾಹಿತಿಯನ್ನು ಒದಗಿಸುವಂತೆ ಸಹ ಕೋರಲಾಗಿತ್ತು.

2. ತೋಟಗಾರಿಕೆ ಇಲಾಖೆಯ ಜವಾಬ್ದಾರಿಯು ದಿನೇ ದಿನೇ ಹೆಚ್ಚಾಗಿ ರೈತರ ಸಮಸ್ಯೆಗಳನ್ನು ಬಗೆಹರಿಸುವ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಬೆಳೆಗಳನ್ನು ಬೆಳೆಸುವ ಹಾಗೂ ತಾಂತ್ರಿಕ ಮತ್ತು ವೈಜ್ಞಾನಿಕ ಸಲಹೆಗಳನ್ನು ನೀಡಲು ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಬಹುತೇಕ ಹುದ್ದೆಗಳನ್ನು ಉಳಿಸಿಕೊಳ್ಳುವ ಅಗತ್ಯತೆಯಿದ್ದು ಈ ಹುದ್ದೆಗಳು ಕ್ಷೇತ್ರಮಟ್ಟದ, ತಾಲ್ಲೂಕು ಮಟ್ಟದ ಬಟವಾಡೆ ಅಧಿಕಾರ ಹೊಂದಿರುವ ಹುದ್ದೆಗಳಾಗಿರುತ್ತವೆ. ಹಾಗೂ ಇವುಗಳು ರೈತರ ಅಭಿವೃದ್ಧಿ ಕಾರ್ಯದಲ್ಲಿ ಅತಿಮಹತ್ವದ ಪಾತ್ರ ವಹಿಸಲು ಈ ಎಲ್ಲಾ ಹುದ್ದೆಗಳು ಇಲಾಖೆಗೆ ಅತೀ ಅವಶ್ಯವಾಗಿದ್ದು ಶೇ.80 ರಷ್ಟು ಹುದ್ದೆ ಕಡಿತ ಯೋಜನೆಯಡಿ ಯಾವುದೇ ಹುದ್ದೆಯನ್ನು ಕಡಿತಗೊಳಿಸಬಾರದೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಕೋರಿದ್ದಾರೆ.

3. ಈ ಕುರಿತಂತೆ ದಿನಾಂಕ:03–02–2005 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿಯ ಸಭೆಯ ನಡವಳಿಯಂತೆ ವಿಭಾಗೀಯ ಮಟ್ಟದ ನಾಲ್ಕು ಜಂಟಿ ನಿರ್ದೇಶಕರ ಹುದ್ದೆಗಳು ಈಗಾಗಲೇ

ರದ್ದಾಗಿರುವುದರಿಂದ ಹಾಗೂ ತೋಟಗಾರಿಕೆ ಜಂಟಿ ನಿರ್ದೇಶಕರ ಎರಡು ಹುದ್ದೆಗಳನ್ನು ಅಪರ ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಸಿರುವುದರಿಂದ ತೋಟಗಾರಿಕೆ ಜಂಟಿ ನಿರ್ದೇಶಕರ ಹುದ್ದೆ ರದ್ದುಪಡಿಸುವುದರಿಂದ ವಿನಾಯ್ತಿ ನೀಡಲಾಗಿದೆ. ಅದೇ ರೀತಿ ತೋಟಗಾರಿಕೆ ಉಪ ನಿರ್ದೇಶಕರ ವೃಂದದಲ್ಲಿ ಇಲಾಖೆಯು ಒಟ್ಟು 42 ಹುದ್ದೆಗಳನ್ನು ಹೊಂದಿದ್ದು, ಇದರ ಪೈಕಿ ವಿಭಾಗೀಯ ಹಂತದ ಕಛೇರಿಗಳನ್ನು ರದ್ದು ಪಡಿಸುವಾಗ 4 ಹುದ್ದೆಗಳನ್ನು ರದ್ದುಪಡಿಸಲಾಗಿದೆ. ಈಗ ಈ ವೃಂದದಲ್ಲಿ ಕೇವಲ 38 ಹುದ್ದೆಗಳ ವೃಂದ ಬಲವಿದೆ. ಈ ವೃಂದದಲ್ಲಿ ಯಾವುದೇ ಹುದ್ದೆಯು ಖಾಲಿ ಇರುವುದಿಲ್ಲ, ಇಲಾಖೆಯ ಕಾರ್ಯನಿರ್ವಾಹಣೆಗಾಗಿ ಇವು ಕನಿಷ್ಠ ಅವಶ್ಯವಾಗಿರುವ ಹುದ್ದೆಗಳಾಗಿರುವುದರಿಂದ ಹಾಗೂ ಇಲಾಖೆಯ ಹಲವಾರು ಯೋಜನೆಗಳನ್ನು ಇತ್ತೀಚೆಗೆ ಜಿಲ್ಲಾ ಪಂಚಾಯತ್‌ಗೆ ವರ್ಗಾಯಿಸಿರುವ ಹಿನ್ನೆಲೆಯಲ್ಲಿ ಈ ಹುದ್ದೆಗಳು ಜಿಲ್ಲಾ ಮಟ್ಟದ ಕಾರ್ಯನಿರ್ವಹಣೆಯಲ್ಲಿ ಅತೀ ಅಗತ್ಯವಾಗಿದ್ದು ಈ 38 ಹುದ್ದೆಗಳಿಗೆ ಶೇ.80 ರಷ್ಟು ಖಾಲಿ ಹುದ್ದೆಗಳ ರದ್ದುಪಡಿಸುವಿಕೆಯಿಂದ ವಿನಾಯ್ತಿ ನೀಡಲು ನಿರ್ಣಯಿಸಲಾಯಿತು. ಇಲಾಖೆಯ ಕಾರ್ಯನಿರ್ವಾಹಣೆಗಳು ಹೆಚ್ಚಾಗುತ್ತಿರುವ ಅಂಶಗಳನ್ನು ಪರಿಗಣಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು/ಸಹಾಯಕ ತೋಟಗಾರಿಕೆ ನಿರ್ದೇಶಕರು ರವರ ವೃಂದಗಳಲ್ಲಿ ದಿನಾಂಕ: 1–4–2000 ರಂದು ಖಾಲಿ ಇದ್ದ ಹುದ್ದೆಗಳ ಪೈಕಿ ಯಾವುದೇ ಖಾಲಿ ಹುದ್ದೆಗಳನ್ನು ರದ್ದುಪಡಿಸಬಾರದೆಂದು ನಿರ್ಣಯಿಸಿದೆ. ಸಹಾಯಕ ತೋಟಗಾರಿಕೆ ಅಧಿಕಾರಿ ವೃಂದದಲ್ಲಿ ಇಲಾಖೆಯು 476 ಹುದ್ದೆಗಳ ವೃಂದ ಬಲವನ್ನು ಹೊಂದಿದ್ದು, ಇದು ತಾಲ್ಲೂಕು ಮಟ್ಟದ ಕಾರ್ಯನಿರ್ವಹಣೆಗೆ ಅಗತ್ಯವಾಗಿರುವುದಿಂದ ಈ ಹುದ್ದೆಗಳನ್ನು ರದ್ದುಗೊಳಿಸುವ ಅವಶ್ಯಕತೆ ಇಲ್ಲವೆಂದು ನಿರ್ಣಯಿಸಿ, ಈ ವೃಂದದಲ್ಲಿನ ಎಲ್ಲಾ ಖಾಲಿಯಿದ್ದ 55 ಹುದ್ದೆಗಳನ್ನು ಉಳಿಸಿಕೊಳ್ಳಲು ಒಪ್ಪಲಾಯಿತು. ಅದೇ ರೀತಿ ತೋಟಗಾರಿಕೆ ಸಹಾಯಕರ ವೃಂದದಲ್ಲಿ ಮಂಜೂರಾದ ಒಟ್ಟಾರೆ ಹುದ್ದೆಗಳ ಪೈಕಿ ದಿನಾಂಕ:1–4–2000 ರಂದು 60 ಹುದ್ದೆಗಳು ಖಾಲಿ ಇದ್ದು, ಪ್ರತಿಯೊಂದು ಹೋಬಳಿಗೆ 2 ತೋಟಗಾರಿಕೆ ಸಹಾಯಕರ ಅವಶ್ಯಕತೆ ಇದ್ದು, ಇದರ ಪ್ರಕಾರ ಎಲ್ಲಾ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಣೆಗಾಗಿ 929 ಹುದ್ದೆಗಳ ಬದಲಾಗಿ ಒಟ್ಟು 1490 ಹುದ್ದೆಗಳು ಬೇಕಾಗುತ್ತವೆ. ಇವು ಇಲಾಖೆಯ ಮೂಲ ಹುದ್ದೆಗಳಾಗಿರುವುದರಿಂದ ಖಾಲಿ ಇರುವ ಹುದ್ದೆಗಳನ್ನು ಶೇ.80 ರಷ್ಟು ಖಾಲಿ ಹುದ್ದೆಗಳ ರದ್ದುಪಡಿಸುವಿಕೆಯಿಂದ ವಿನಾಯ್ತಿ ನೀಡಲು ನಿರ್ಣಯಿಸಲಾಯಿತು. ಪ್ರಥಮ ದರ್ಜೆ ಸಹಾಯಕರ 247 ಹುದ್ದೆಗಳ ಪೈಕಿ ದಿನಾಂಕ:01–04–2000 ರಂದು ಖಾಲಿಯಿದ್ದ 24 ಹುದ್ದೆಗಳು, ದ್ವಿತೀಯ ದರ್ಜೆ ಸಹಾಯಕರ 180 ಹುದ್ದೆಗಳ ಪೈಕಿ ಖಾಲಿಯಿದ್ದ 9 ಹುದ್ದೆಗಳು ಶೀಘ್ರಲಿಪಿಗಾರರ 14 ಹುದ್ದೆಗಳ ಪೈಕಿ ಖಾಲಿಯಿದ್ದ 3 ಹುದ್ದೆಗಳನ್ನು ಹಾಗೂ 2146 ತೋಟಗಾರರ ಹುದ್ದೆಗಳ ಪೈಕಿ 179 ಖಾಲಿ ಹುದ್ದೆಗಳು ಕನಿಷ್ಠ ಅವಶ್ಯವಾಗಿರುವ ಹುದ್ದೆಗಳಾಗಿರುವುದರಿಂದ, ಈ ವೃಂದಗಳಲ್ಲಿನ ಎಲ್ಲಾ ಖಾಲಿ ಹುದ್ದೆಗಳನ್ನು ಉಳಿಸಿಕೊಳ್ಳಲು ತೀರ್ಮಾನಿಸಲಾಯಿತು.

4. ವಾಹನ ಚಾಲಕರು/ಹಿರಿಯ ವಾಹನ ಚಾಲಕರ 132 ಹುದ್ದೆಗಳ ಪೈಕಿ ಖಾಲಿ ಇರುವ ವಾಹನ ಚಾಲಕರ 17 ಹುದ್ದೆಗಳನ್ನು ರದ್ದುಪಡಿಸಲು ಹಾಗೂ ಇನ್ನು ಮುಂದೆ ವಾಹನ ಚಾಲಕರ ಹುದ್ದೆಗಳು ನಿವೃತ್ತಿಯ ಕಾರಣ ಖಾಲಿಯಾದಾಗ/ಹಾಗೂ ವಾಹನ ಚಾಲಕರನ್ನು ನೇಮಿಸುವ ಅವಶ್ಯವಿದ್ದಲ್ಲಿ, ಈ ಖಾಲಿ ಹುದ್ದೆಗಳನ್ನು ಬಾಹ್ಯ ಮೂಲಗಳ ಮೂಲಕ ಭರ್ತಿ ಮಾಡುವಂತೆ ಸೂಚಿಸಲಾಯಿತು. ಇದೇ ರೀತಿ ಇನ್ನು ಮುಂದೆಯೂ ಇಲಾಖೆಯ ಕಾರ್ಯ ನಿರ್ವಹಣೆಗೆ ವಾಹನಗಳ ಅವಶ್ಯಕತೆ ಇದ್ದಲ್ಲಿ ಹೊಸ ವಾಹನಗಳನ್ನು ಖರೀದಿಸುವ ಬದಲಾಗಿ ವಾಹನಗಳನ್ನು ಬಾಹ್ಯ ಮೂಲದಿಂದ "contract" ಮೇರೆಗೆ ಪಡೆಯುವಂತೆ ನಿರ್ಣಯಿಸಲಾಯಿತು. ಇಲಾಖೆಗೆ ಮಂಜೂರಾಗಿರುವ 126 peon/Attender ಹುದ್ದೆಗಳ ಪೈಕಿ ಖಾಲಿ ಇರುವ 26 ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಲಾಯಿತು.

5. ಅಂತಿಮವಾಗಿ ತೋಟಗಾರಿಕೆ ಇಲಾಖೆಯಲ್ಲಿ ಈ ಕೆಳಕಂಡ ವೃಂದದ ಖಾಲಿ ಹುದ್ದೆಗಳನ್ನು ರದ್ದುಪಡಿಸಲು ನಿರ್ಣಯಿಸಲಾಗಿದೆ:–

(ಎ) ವಾಹನ ಚಾಲಕರು ಹಾಗೂ ಹಿರಿಯ ವಾಹನ ಚಾಲಕರ ವೃಂದದಲ್ಲಿ : 17 ಹುದ್ದೆಗಳು.

(ಬಿ) ದಲಾಯತ್ (peon) : ಅಟೆಂಡರ್ ವೃಂದದಲ್ಲಿ : 26 ಹುದ್ದೆಗಳು.

ಮೇಲೆ ಓದಲಾದ (5)ರ ಸುತ್ತೋಲೆ ಮತ್ತು (6)ರ ಅನಧಿಕೃತ ಟಿಪ್ಪಣಿಯನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಕೃತೋಇ 127 ತೋಸೇಪ 2003, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2005**

ತೋಟಗಾರಿಕೆ ಇಲಾಖೆಯಲ್ಲಿ ದಿನಾಂಕ:1–4–2000 ರಂದು ಈ ಕೆಳಕಂಡ ವೃಂದಗಳಲ್ಲಿಯ ಖಾಲಿ ಇರುವ ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

(1) ವಾಹನ ಚಾಲಕರು : ಹಿರಿಯ ವಾಹನ ಚಾಲಕರ ವೃಂದ – 17 ಹುದ್ದೆಗಳು.

(2) ಪ್ಯೂನ್ಸ್ / ಅಟೆಂಡರ್ ವೃಂದ – 26 ಹುದ್ದೆಗಳು.

ಮುಂದುವರಿದು ವಾಹನ ಚಾಲಕರ ವೃಂದದಲ್ಲಿ ನಿವೃತ್ತಿಯ ಕಾರಣ ಹುದ್ದೆಗಳು ಖಾಲಿಯಾದಾಗ ಈ ಹುದ್ದೆಗಳನ್ನು ಬಾಹ್ಯ ಮೂಲಗಳ ಮೂಲಕ ಭರ್ತಿ ಮಾಡಲು ಹಾಗೂ ಇದೇ ರೀತಿ ಇಲಾಖೆಯ ಕಾರ್ಯ ನಿರ್ವಹಣೆಗೆ ವಾಹನಗಳ ಅವಶ್ಯಕತೆ ಇದ್ದಲ್ಲಿ ಹೊಸ ವಾಹನಗಳನ್ನು ಖರೀದಿಸುವ ಬದಲಾಗಿ ಬಾಹ್ಯ ಮೂಲದ ಮುಖಾಂತರ (contract) ಮೇರೆಗೆ ಪಡೆಯುವಂತೆ ಆದೇಶಿಸಿದೆ.

ಮೇಲಿನ ವೃಂದಗಳಲ್ಲಿನ ಹುದ್ದೆಗಳ ರದ್ದತಿಯನ್ನು ಹೊರತುಪಡಿಸಿ, ಇಲಾಖೆಯ ಉಳಿದ ವೃಂದಗಳಲ್ಲಿ ದಿನಾಂಕ: 1–4–2000ರಂದು ಇದ್ದ ಖಾಲಿ ಹುದ್ದೆಗಳ ಪೈಕಿ ಶೇ.80 ರಷ್ಟು ಹುದ್ದೆಗಳನ್ನು ರದ್ದು ಪಡಿಸುವುದರಿಂದ ವಿನಾಯ್ತಿಯನ್ನು ನೀಡಲಾಗಿರುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯ(ಆ.ಸು) ಅ.ಟಿ. ಸಂ: 11 ಈಕಾಅ 2005 ದಿನಾಂಕ: 9–8–2005ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1324 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಬಾಲಭವನ ಸೊಸೈಟಿ ನೌಕರರುಗಳಿಗೆ ಪಿಎಫ್ ಸೌಲಭ್ಯವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ:** 1) ಸಹಾಯಕ ಪ್ರಾವಿಡೆಂಟ್ ಫಂಡ್ ಆಯುಕ್ತರು ಎನ್ ಫೋರ್ಸ್‌ಮೆಂಟ್ ಎಂಪ್ಲಾಯೀಸ್ ಪ್ರಾವಿಡೆಂಟ್ ಫಂಡ್ ಆರ್ಗನೈಸೇಷನ್, ಕರ್ನಾಟಕ ಏಜನ್ ರವರ ದಿನಾಂಕ: 28.8.2003ರ ನಡವಳಿ.

2) ಬಾಲಭವನ ಸೊಸೈಟಿ ನೌಕರರ ಮನವಿ ದಿನಾಂಕ: 19.12.2003.

3) ಕಾರ್ಯದರ್ಶಿ ಬಾಲಭವನ ಬೆಂಗಳೂರು ಇವರ ಪತ್ರ ಸಂಖ್ಯೆ: ಭಾಭಬೆಂ/ಸಿಬ್ಬಂದಿ/ಇಪಿಎಫ್/2005-06/238, ದಿನಾಂಕ: 3.6.2005.

**ಪ್ರಸ್ತಾವನೆ:**

ಬಾಲಭವನ ನೌಕರರುಗಳು ತಮಗೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವ ಇತರೆ ಸೌಲಭ್ಯಗಳನ್ನು ಅಂದರೆ ಕೆಜಿಐಡಿ, ಜಿಪಿಎಫ್, ಇತ್ಯಾದಿ ಸೌಲಭ್ಯಗಳನ್ನು ವಿಸ್ತರಿಸುವಂತೆ ಅಥವಾ ಕೈಗಾರಿಕಾ ನೌಕರರುಗಳಿಗೆ ಸಿಗುವ ಸೌಲಭ್ಯಗಳಾದ ಸಿಪಿಎಫ್, ಹಾಗೂ ಇಎಸ್ಐ ಸೌಲಭ್ಯಗಳನ್ನು ಒದಗಿಸುವಂತೆ ಪ್ರಾವಿಡೆಂಟ್ ಫಂಡ್ ಆಯುಕ್ತರಿಗೆ ಸಲ್ಲಿಸಿದ ಅರ್ಜಿಯ ಮೇರೆಗೆ ವಿಚಾರಣೆಯನ್ನು ನಡೆಸಿ, ಸಹಾಯಕ ಪ್ರಾವಿಡೆಂಟ್ ಫಂಡ್ ಆಯುಕ್ತರು ಎನ್‌ಫೋರ್ಸ್‌ಮೆಂಟ್ ಇವರು ದಿನಾಂಕ: 28.8.2003 ರಂದು ನಡೆಸಿದ ಸಭೆಯ ನಡವಳಿಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

"All the employees who were on date of coverage of the establishment under the Employees", Provident Fund and Miscellaneous Provisions Act, 1952, who were not considered as Government employees should be extended benefits under the said Act and Scheme from their respective date of employment to such time they have been absorbed as Government employees. failing which dues will be assessed on the available records and action will be taken to recover the dues".

ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಬಾಲಭವನ ಸೊಸೈಟಿ ನೌಕರರುಗಳಿಗೆ ಪಿಎಫ್ ಮತ್ತು ಇಎಸ್ಐ ಸೌಲಭ್ಯಗಳನ್ನು ಒದಗಿಸುವಂತೆ ವಿನಂತಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ, ಕಾರ್ಯದರ್ಶಿ, ಬಾಲಭವನ ಸೊಸೈಟಿ ಇವರು ಸದರಿ ಸಂಸ್ಥೆಯು ದಿನಾಂಕ: 9.9.85 ರಂದು ರಿಜಿಸ್ಟರ್ ಮಾಡಿದ ಸಂಸ್ಥೆಯಾಗಿದ್ದು, 1988 ರವರೆಗೆ ಸಮಾಜ ಕಲ್ಯಾಣ ಇಲಾಖೆಯ ಅಡಿಯಲ್ಲಿದ್ದು ನಂತರದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವ್ಯಾಪ್ತಿಗೆ ವರ್ಗಾಯಿಸಲಾಗಿದೆ. ಈ ಸಂಸ್ಥೆಯಲ್ಲಿ ಒಟ್ಟು 10 ಹುದ್ದೆಗಳು ಯೋಜನೇತರ ಹುದ್ದೆಗಳಾಗಿದ್ದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಈ ಹುದ್ದೆಗಳನ್ನು ನಿಯೋಜನೆ ಮೇಲೆ ನೌಕರರುಗಳು ಕಾರ್ಯ ನಿರ್ವಹಿಸುತ್ತಿದ್ದಾರೆ. ಬಾಲಭವನ ಸೊಸೈಟಿ ಎಂಪ್ಲಾಯೀಸ್ ಸರ್ವೀಸ್ ರೂಲ್ಸ್ 1991 ರಡಿಯಲ್ಲಿ ವಿಲೀನಗೊಂಡ 52 ನೌಕರರುಗಳಿಗೆ ಸರ್ಕಾರಿ ನೌಕರರುಗಳಿಗೆ ನೀಡುವ ವೇತನದೊಂದಿಗೆ ಸಾಮೂಹಿಕ ವಿಮೆ ಸೌಲಭ್ಯವನ್ನು ಒದಗಿಸಲಾಗಿದೆ. ಇದರೊಂದಿಗೆ ಜೀವ ವಿಮಾ ಸಂಸ್ಥೆಯ ಪಿಂಚಣಿ ಯೋಜನೆಯಡಿಯಲ್ಲಿ ಪ್ರತಿ ನೌಕರರಿಗೆ ಮಾಸಿಕ ರೂ.50/- ರಂತೆ ವಿಮೆಯನ್ನು ಆಡಳಿತ ಮಂಡಳಿ ವತಿಯಿಂದ ಪಾವತಿಸಲಾಗುತ್ತಿದೆ. ಈ ನೌಕರರುಗಳು ಬಾಲಭವನ ಸೊಸೈಟಿ ಎಂಪ್ಲಾಯೀಸ್ ಸರ್ವೀಸ್ ರೂಲ್ಸ್ 1991 ಅಡಿ ವಿಲೀನಗೊಂಡ ನೌಕರರಾಗಿರುವುದರಿಂದ ಇವರುಗಳಿಗೆ ಸರ್ಕಾರಿ ನೌಕರರುಗಳಿಗೆ ನೀಡಲಾಗುವ ಸೌಲಭ್ಯಗಳು ದೊರೆಯುವುದಿಲ್ಲ.

ಮೇಲಿನ ಸಹಾಯಕ ಪ್ರಾವಿಡೆಂಟ್ ಫಂಡ್ ಆಯುಕ್ತರು ಎನ್‌ಫೋರ್ಸ್ ಮೆಂಟ್ ಇವರ ದಿನಾಂಕ: 28.8.2003ರ ಆದೇಶದಂತೆ ಬಾಲಭವನ ಸೊಸೈಟಿಯ ಎಲ್ಲಾ ಸಿಬ್ಬಂದಿಗೆ ಆಡಳಿತ ವರ್ಗದಿಂದ ಇವರ ವೇತನಕ್ಕೆ ಅನುಸಾರವಾಗಿ ಪ್ರಾವಿಡೆಂಟ್ ವಂತಿಗೆಯನ್ನು ನೀಡಬೇಕಾಗಿದ್ದು, ನೌಕರರ ಪರವಾಗಿ ನೀಡಬೇಕಾದ ಪಿಎಫ್ ವಂತಿಗೆಯನ್ನು ಯಾವ ರೀತಿ ಭರಿಸಬೇಕು ಎಂಬುದನ್ನು ಪರಿಶೀಲಿಸಿ ಪಿಎಫ್ ಸೌಲಭ್ಯವನ್ನು ಅಳವಡಿಸಿಕೊಂಡಲ್ಲಿ ಜೀವ ವಿಮೆ ನಿಗಮಕ್ಕೆ ನೀಡಲಾಗುತ್ತಿರುವ ಮಾಸಿಕ ರೂ.50ನ್ನು ಸ್ಥಗಿತಗೊಳಿಸಿ ಆಯಾಯ ನೌಕರರುಗಳೇ ಜೀವ ವಿಮೆಯನ್ನು ಪಾವತಿ ಮಾಡುವಂತೆ ಪರಿಗಣಿಸಿ ಪಿಎಫ್ ಆಯುಕ್ತರ ಕಛೇರಿಯಿಂದ ದಿನಾಂಕ: 28.8.2003 ರಂದು ನಿರ್ದೇಶಿಸಿದಂತೆ, ಪಿಎಫ್ ವಂತಿಗೆಯನ್ನು ಭವಿಷ್ಯವರ್ತಿಯಾಗಿ ಅಳವಡಿಸುವಂತೆ ಕೋರಲಾಗಿದೆ. ಬಾಲಭವನ ಸೊಸೈಟಿಯ ವಿಲೀನಗೊಂಡ ನೌಕರರುಗಳು ಜೀವವಿಮೆ ನಿಗಮಕ್ಕೆ ನೀಡಲಾಗುತ್ತಿರುವ ವಂತಿಗೆಯನ್ನು ತಮ್ಮ ವೇತನದಿಂದ ಭರಿಸುವುದಾಗಿ ಒಪ್ಪಿಗೆ ಪತ್ರಗಳನ್ನು ನೀಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 225 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2005**

"Employees Provident Funds and Miscellaneous Provisions Act 1952 ಅಡಿ ಸರ್ಕಾರಿ ನೌಕರರಲ್ಲದವರಿಗೆ ಪಿ.ಎಫ್. ಸೌಲಭ್ಯ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ದಿನಾಂಕ: 28.8.2003ರ ಪ್ರಾವಿಡೆಂಟ್ ಫಂಡ್ ಕಮಿಷನ್‌ರ ಆದೇಶದಂತೆ ಬಾಲಭವನ ಸೊಸೈಟಿ ನೌಕರರುಗಳಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಪಿಎಫ್ ಸೌಲಭ್ಯವನ್ನು ಒದಗಿಸಲು ಆದೇಶಿಸಲಾಗಿದೆ.

ಹಾಲಿ ಜೀವ ವಿಮಾ ನಿಗಮಕ್ಕೆ ಪಾವತಿ ಮಾಡುತ್ತಿರುವ ಮಾಸಿಕ ರೂ.50/- ನ್ನು ಸಂಬಂಧಪಟ್ಟ ನೌಕರರುಗಳ ವೇತನದಿಂದ ಭರಿಸಲು ನೌಕರರುಗಳ ಒಪ್ಪಿಗೆ ನೀಡಿರುವುದರಿಂದ ಮುಂದಿನ ಕ್ರಮ ಜರುಗಿಸಲು ಸೂಚಿಸಿದೆ.

ಬಾಲಭವನ ಸೊಸೈಟಿ ಎಂಪ್ಲಾಯೀಸ್ ಸರ್ವೀಸ್ ರೂಲ್ಸ್ 1991ಕ್ಕೆ ಸೂಕ್ತ ತಿದ್ದುಪಡಿಯನ್ನು ಹೊರಡಿಸಲು ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 1201 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಜಿಲ್ಲಾ ನೋಂದಣಿ ಕಛೇರಿ, ಶ್ರೀರಾಂಪುರ (ಅಪಮೌಲ್ಯ ತನಿಖಾ ವಿಭಾಗ) ಇದನ್ನು ಸ್ಥಳಾಂತರಿಸಲು ಮತ್ತು ಕಟ್ಟಡದ ಬಾಡಿಗೆಯನ್ನು ನಿಗದಿಪಡಿಸುವ ಬಗ್ಗೆ ಆದೇಶ.

**ಓದಲಾಗಿದೆ:** ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ: ಬಿಎಲ್‌ಡಿ-17/02-03, ದಿನಾಂಕ: 6/10.06.2005 ಮತ್ತು ದಿನಾಂಕ: 28.7.2005.

**ಪ್ರಸ್ತಾವನೆ:**

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರು, ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ಶ್ರೀರಾಂಪುರ (ಅಪಮೌಲ್ಯ ತನಿಖಾ ವಿಭಾಗ), ರಾಜಾಜಿನಗರ ವಲಯ, ಈ ಕಛೇರಿಯು ನಂ.1613/31, ಮೊದಲನೇ ಮಹಡಿ, ಶ್ರೀರಾಂಪುರ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಛೇರಿ ಕಟ್ಟಡದಲ್ಲಿ ನೀರಿನ ಸೌಲಭ್ಯ, ಸಮರ್ಪಕವಾಗಿರುವುದಿಲ್ಲ ಮತ್ತು ವಿದ್ಯುತ್ ಸಂಪರ್ಕವೂ ಕೂಡ ಆಗಿಂದಾಗ್ಗೆ ಕೆಟ್ಟು ಹೋಗಿ ದಿನನಿತ್ಯದ ಕಛೇರಿ ಕಾರ್ಯಕ್ಕೆ ತೊಂದರೆಯಾಗುತ್ತಿರುವುದಲ್ಲದೆ ನೋಂದಣಿಗಾಗಿ ಬರುವ ಸಾರ್ವಜನಿಕರಿಗೆ ವಾಹನ ನಿಲುಗಡೆ ಸೌಲಭ್ಯವಿರುವುದಿಲ್ಲವಾದ್ದರಿಂದ ಸದರಿ ಕಛೇರಿಯನ್ನು ಶ್ರೀಮತಿ ಸಿ.ಆರ್. ಮಂಗಳಾ ಕೋಂ ಬಿ.ಎನ್. ರಾಜಣ್ಣ ಇವರ ಮಾಲೀಕತ್ವದ ಬೆಂಗಳೂರು, ರಾಜಾಜಿನಗರದ 1ನೇ ಮುಖ್ಯ ರಸ್ತೆಯಲ್ಲಿರುವ ಕಟ್ಟಡ ಸಂಖ್ಯೆ: 123 ರಲ್ಲಿನ 2ನೇ ಮಹಡಿಯಲ್ಲಿರುವ ಒಟ್ಟು 2204

ಚದರ ಅಡಿ ಕಾರ್ಪೆಟ್ ವಿಸ್ತೀರ್ಣವುಳ್ಳ ಸದರಿ ಕಟ್ಟಡಕ್ಕೆ ಸ್ಥಳಾಂತರಿಸಲು ಮತ್ತು ಲೋಕೋಪಯೋಗಿ ಇಲಾಖೆಯು ನಿಗದಿ ಪಡಿಸಿರುವ ಮಾರುಕಟ್ಟೆ ದರ ಚದರ ಅಡಿಗೆ ರೂ.18-00 ರಂತೆ ಒಟ್ಟು ವಿಸ್ತೀರ್ಣ 2204 ಚದರ ಅಡಿಗೆ ಒಟ್ಟು ರೂ.39,672/- (ರೂ. ಮೂವತ್ತೊಂಬತ್ತು ಸಾವಿರದ ಆರು ನೂರ ಎಪ್ಪತ್ತೆರಡು ಮಾತ್ರ) ಗಳನ್ನು ನಿಗದಿಪಡಿಸಲು ಕೋರಿರುತ್ತಾರೆ.

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಮೇಲ್ಕಂಡ ಕಟ್ಟಡಕ್ಕೆ ಚದರ ಅಡಿ ಒಂದಕ್ಕೆ ರೂ.15/- ರಂತೆ 2204 ಚದರ ಅಡಿಗೆ ರೂ.33,060/- ರಂತೆ ಪ್ರತಿ ತಿಂಗಳಿಗೆ ಬಾಡಿಗೆ ನಿಗದಿಪಡಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 28 ಮುನೋಸ 2005, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, (ಅಪಮೌಲ್ಯ ತನಿಖಾ ವಿಭಾಗ), ರಾಜಾಜಿನಗರ ವಲಯ, ಶ್ರೀರಾಂಪುರ ಈ ಕಛೇರಿಯನ್ನು ಹಾಲೀ ಕಾರ್ಯನಿರ್ವಹಿಸುತ್ತಿರುವ ಕಟ್ಟಡದಿಂದ ಶ್ರೀಮತಿ ಸಿ.ಆರ್. ಮಂಗಳ ಕೋಂ. ಬಿ.ಎನ್. ರಾಜಣ್ಣ ಇವರ ಮಾಲೀಕತ್ವದ ಕಟ್ಟಡಕ್ಕೆ ತಿಂಗಳಿಗೆ ರೂ.33,060/- (ರೂ. ಮೂವತ್ತಮೂರು ಸಾವಿರದ ಅರವತ್ತು ಮಾತ್ರ) ಬಾಡಿಗೆಯನ್ನು ನಿಗದಿಪಡಿಸಿ ಆದೇಶಿಸಿದೆ.

ಈ ಕಟ್ಟಡಕ್ಕೆ ಸ್ಥಳಾಂತರಿಸುವ ಮೊದಲು ಕಟ್ಟಡದ ಮಾಲೀಕರಿಂದ ಕನಿಷ್ಠ 5 ವರ್ಷಗಳ ಅವಧಿಗೆ ಗುತ್ತಿಗೆ ಕರಾರು ಪತ್ರ ಪಡೆದು ನಂತರ ಸ್ಥಳಾಂತರಿಸಲು ಆಡಳಿತ ಇಲಾಖೆಗೆ ಆದೇಶಿಸಿದೆ.

ಈ ವೆಚ್ಚವನ್ನು 2005-06ನೇ ಸಾಲಿನ "ಲೆಕ್ಕ ಶೀರ್ಷಿಕೆ 2030-03-001-01-00-071ರ ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1209 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ENERGY SECRETARIAT

**Subject:** Karnataka Electricity Regulatory Commission-Release of First Quarter Fund to KERC out of the provision made in the Budget Estimates for the year 2005-06 - Orders reg.

**Read:** Letter No.F/01/1/837 dated: 9.6.2005.

**PREAMBLE:**

A sum of Rs.206.00 lakhs has been provided in the Budget estimates for the Financial year 2005-06 under the Head of Account 2801-80-101-1-07-KERC-101-GIA (Non-Plan). In the letter dated 9.6.2005 read above, Secretary, KERC has requested to recoup the Permanent Imprest by releasing Rs.57.29 lakhs to meet the expenditures in the First Quarter of the year 2005-2006 (based on actual expenditure) in order to maintain the balance of Rs.75 lakhs in the Permanent Imprest Account sanctioned vide G.O. dated: 19.10.2002. Hence, this order

**GOVERNMENT ORDER No. DE 30 PSR 2001, Bangalore, Dated: 9th August 2005**

In the circumstances explained in the preamble, Government are pleased to release, the amount of Rs.57.29 lakhs (Rupees Fifty Seven Lakhs Twenty Nine Thousand Only) based on the actual expenditure incurred by the Karnataka Electricity Regulatory Commission (KERC) under the Head of Account **"2801-80-101-1-07-KERC-101-GIA (Non-Plan)"** to meet the expenditure for the First (I) Quarter of the year 2005-06 and to maintain the balance of Rs.75.00 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No. FD/1215/Exp-1/2005 dated: 18.07.2005.

By Order and in the Name of the Governor of Karnataka,

**SURESH B. KRISHNAPPANAVAR**

P.R. 1233 Under Secretary to Government, Energy Department.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಮಮಇ 787 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2005**

ಸರ್ಕಾರಿ ಆದೇಶ ಸಂಖ್ಯೆ: ಮಮಇ 787 ಎಸ್‌ಜೆಡಿ 2004, ದಿನಾಂಕ: 28.5.2005ರ ಆದೇಶದ ಅನುಬಂಧದಲ್ಲಿ ಕ್ರಮ ಸಂಖ್ಯೆ 1, 3, 4 ಮತ್ತು 5ರ ಹುದ್ದೆಗಳ ಪದನಾಮಗಳನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

| ಕ್ರ. ಸಂ. | ನೌಕರರ ಹೆಸರು | ಅನುಬಂಧದಲ್ಲಿನ ಕ್ರಮ ಸಂಖ್ಯೆ | ಅನುಬಂಧದಲ್ಲಿ ನಮೂದಿಸಿರುವ ಹುದ್ದೆಯ ಹೆಸರು | ಬದಲಾವಣೆಯಾಗಬೇಕಾದ ಹುದ್ದೆಯ ಹೆಸರು |
|---|---|---|---|---|
| 1 | ಸಿ.ಜಿ. ವಿಶ್ವನಾಥ್ | 1 | ಎಲೆಕ್ಟ್ರಿಶಿಯನ್ | ಟೆಕ್ನಿಕಲ್ ಅಸಿಸ್ಟೆಂಟ್ (Elec) |
| 2 | ಎ. ಜೇವಿಯರ್ | 3 | ಗ್ಯಾಂಗ್ ಮೆನ್ | ಟಾಯ್ ಟ್ರೇನ್ ಗಾರ್ಡ್ |

| ಕ್ರ. ಸಂ. | ನೌಕರರ ಹೆಸರು | ಅನುಬಂಧದಲ್ಲಿನ ಕ್ರಮ ಸಂಖ್ಯೆ | ಅನುಬಂಧದಲ್ಲಿ ನಮೂದಿಸಿರುವ ಹುದ್ದೆಯ ಹೆಸರು | ಬದಲಾವಣೆಯಾಗಬೇಕಾದ ಹುದ್ದೆಯ ಹೆಸರು |
|---|---|---|---|---|
| 3 | ಎಂ. ನಾಗರಾಜ | 4 | ಎಲೆಕ್ಟ್ರಿಶಿಯನ್ | ಎಲೆಕ್ಟ್ರಿಶಿಯನ್ (Sound and Electric) |
| 4 | ಎ. ಕೃಷ್ಣಪ್ಪ | 5 | ದಲಾಯತ್ | ಜವಾನ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 1240 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ಸೇರ್ಪಡೆ ಸಂಖ್ಯೆ: ಜಸಂಇ 49 ಎನ್‌ಪಿಸಿ 2005, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಜಸಂಇ 49 ಎನ್‌ಪಿಸಿ 2005, ದಿನಾಂಕ: 2ನೇ ಆಗಸ್ಟ್ 2005 ರಲ್ಲಿನ "ಶ್ರೀ ಭರತ್‌ಲಾಲ್ ಮೀನಾ, ಭಾ.ಆ.ಸೇ. ರವರನ್ನು ಕಾವೇರಿ ನೀರಾವರಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಿರುವುದರಿಂದ, ಸದರಿಯವರನ್ನು ಕಾವೇರಿ ನೀರಾವರಿ ನಿಗಮದ ಮಂಡಳಿಯ ನಿರ್ದೇಶಕರನ್ನಾಗಿ" ಎಂಬುದಾಗಿ ಇರುವುದರ ಮುಂದಕ್ಕೆ 'ಶ್ರೀ ಪಿ.ಎನ್. ಶ್ರೀನಿವಾಸಚಾರಿ, ಭಾ.ಆ.ಸೇ., ಇವರ ಹುದ್ದೆಯಲ್ಲಿ' ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಶ್ರೀಧರ್**

ಪಿ.ಆರ್. 1258 ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3) (ಪ್ರ),
ಜಲ ಸಂಪನ್ಮೂಲ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ಭಾಷಾಂತರಕಾರರನ್ನು ಅಡ್ವೋಕೇಟ್ ಜನರಲ್‌ರವರ ಕಛೇರಿಗೆ ಶಾಶ್ವತವಾಗಿ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲಾ 108 ಎಲ್‌ಎಜಿ 88, ದಿನಾಂಕ: 20.3.99.
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 59 ಸೇಲೋಯು 98, ದಿನಾಂಕ: 2.8.1999.
3) ಅಡ್ವೋಕೇಟ್ ಜನರಲ್‌ರವರ ಕಛೇರಿ ಪತ್ರ ದಿನಾಂಕ: 8.9.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅಡ್ವೋಕೇಟ್ ಜನರಲ್ ಇವರ ಕಛೇರಿಗೆ ಮೂರು ಭಾಷಾಂತರಕಾರರ ಹುದ್ದೆಗಳು ಮಂಜೂರಾಗಿದ್ದು, ಅವುಗಳಲ್ಲಿ ಎರಡು ಹುದ್ದೆಗಳನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಪ್ರತಿ ನಿಯೋಜನೆ ಮೇಲೆ ತುಂಬಲಾಗಿತ್ತು.

ರಾಜ್ಯದ ಉಚ್ಚನ್ಯಾಯಾಲಯ ಹಾಗೂ ಸರ್ವೋಚ್ಚನ್ಯಾಯಾಲಯದ ಕೆಲವು ಪ್ರಕರಣಗಳಲ್ಲಿ ಕಡ್ಡಾಯವಾಗಿ ಭಾಷಾಂತರ ಮಾಡಿದ ದಾಖಲೆಗಳನ್ನು ಹಾಜರುಪಡಿಸಬೇಕಾಗಿರುವ ಕಾರಣ ಈ ಭಾಷಾಂತರಕಾರರನ್ನು ಅಡ್ವೋಕೇಟ್ ಜನರಲ್ ಇವರ ಕಛೇರಿಗೆ ಶಾಶ್ವತವಾಗಿ ವರ್ಗಾಯಿಸುವಂತೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಆ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 53 ಎಲ್‌ಎಜಿ 2004, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2005**

ಕರ್ನಾಟಕ ಲೋಕಾಯುಕ್ತ ಇವರ ಕಛೇರಿಯ ಭಾಷಾಂತರಕಾರರಾದ ಶ್ರೀಮತಿ ಗೌರಮ್ಮ ಹಾಗೂ ಶ್ರೀ ಬಿ.ಎಲ್. ಕಟ್ಟಿಮನಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ (1957) ನಿಯಮ 16 ಮೇರೆಗೆ ಶಾಶ್ವತವಾಗಿ ಅಡ್ವೋಕೇಟ್ ಜನರಲ್ ಇವರ ಕಛೇರಿಗೆ ವರ್ಗಾಯಿಸಲಾಗಿದೆ.

ಇದಕ್ಕೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 87 ಸೇಲೋಯು 2004, ದಿನಾಂಕ: 2.4.2005 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 1260 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಕಾನೂನು ಇಲಾಖೆ (ಆಡಳಿತ-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಬೆಂಗಳೂರು (ಗ್ರಾಮಾಂತರ) ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ಕಾಮಗಾರಿ ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 9.3.2005ರ ಪತ್ರ ಸಂಖ್ಯೆ: ಸಿಬ್ಬಂದಿ (2) ಕಟ್ಟಡ (2) ವಿವ 46/2001-02, ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯ ಮಹಾ ನಿರ್ದೇಶಕರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 9.3.2005ರ ತಮ್ಮ ಪತ್ರದಲ್ಲಿ ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರು ಬೆಂಗಳೂರು (ಗ್ರಾಮಾಂತರ) ಜಿಲ್ಲಾ ತರಬೇತಿ ಸಂಸ್ಥೆಯ ಆಡಳಿತ ಕಛೇರಿ ಹಾಗೂ ತರಬೇತಿ ಕಟ್ಟಡಗಳ ನಿರ್ಮಾಣಕ್ಕೆ 51 ಲಕ್ಷ ರೂ.ಗಳ ಅಂದಾಜು ಪಟ್ಟಿಯನ್ನು ಕಳುಹಿಸುತ್ತಾ, ಬೆಂಗಳೂರು (ಗ್ರಾಮಾಂತರ) ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿದ್ದಾರೆ. 2005-06ನೇ ಸಾಲಿನ ಆಯವ್ಯಯದಲ್ಲಿ ಬೆಂಗಳೂರು (ಗ್ರಾಮಾಂತರ) ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಲಭ್ಯವಿರುವುದರಿಂದ 51 ಲಕ್ಷ ರೂ.ಗಳ ಈ ಕಾಮಗಾರಿಗಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿದ್ದಾರೆ. ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 143 ಇಆತ 2004, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2005**

ಬೆಂಗಳೂರು (ಗ್ರಾಮಾಂತರ) ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡದ ಕಾಮಗಾರಿಯನ್ನು 2005-06ನೇ ಸಾಲಿನಲ್ಲಿ ಆಡಳಿತ ತರಬೇತಿ ಸಂಸ್ಥೆ, ಮಹಾ ನಿರ್ದೇಶಕರು 51 ಲಕ್ಷ ರೂ.ಗಳ (ಐವತ್ತೊಂದು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ವೆಚ್ಚದ ಕಾಮಗಾರಿಯನ್ನು 50 ಲಕ್ಷ ರೂ.ಗಳ ಅಂದಾಜಿಗೆ ಮಿತಿಗೊಳಿಸುವ ಷರತ್ತಿಗೆ ಒಳಪಟ್ಟು ಒಟ್ಟು 50 ಲಕ್ಷ ರೂ.ಗಳ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಮೊತ್ತದಲ್ಲಿ ಲೋಕೋಪಯೋಗಿ ಇಲಾಖೆಯ ಮೂಲಕ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ. 2005-06ನೇ ಸಾಲಿನ ಆಯವ್ಯಯದಲ್ಲಿ ಸದರಿ ಕಾಮಗಾರಿ ನಿರ್ಮಾಣಕ್ಕಾಗಿ 15 ಲಕ್ಷ ರೂ.ಗಳ ಅನುದಾನವನ್ನು ಒದಗಿಸಿರುವ ಕಾರಣ, ಕಾಮಗಾರಿಯನ್ನು ಕೂಡಲೇ ಕೈಗೊಳ್ಳಲು ಆದೇಶಿಸಿದೆ.

ಇದರ ಮೇಲಿನ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ '4059-ಕಟ್ಟಡಗಳ ಮೇಲಿನ ಬಂಡವಾಳ' ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಲೋಕೋಪಯೋಗಿ ಇಲಾಖೆಯು ತನ್ನ ದಿನಾಂಕ: 29.7.2005ರ ಟಿಪ್ಪಣಿ ಸಂಖ್ಯೆ: ಲೋಇ 32 ಬಿಜಿಎಂ 2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಅನಸೂಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ).

ಪಿ.ಆರ್. 1261

**ವಿಷಯ:** ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ: ಸಿಆಸುಇ 25 ಎಸ್ಇಎನ್ 04, ದಿನಾಂಕ: 31.3.2004.
2. ಶ್ರೀ ಎಸ್. ಕೃಷ್ಣಶೆಟ್ಟಿ ಅವರ ದಿನಾಂಕ: 15.5.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಸ್. ಕೃಷ್ಣಶೆಟ್ಟಿ, ಮುಖ್ಯ ಇಂಜಿನಿಯರ್ ಇವರು ಕಾರ್ಯಪಾಲಕ ಇಂಜಿನಿಯರ್ ಆಗಿ ನಂ.2, ವಿಶ್ವೇಶ್ವರಯ್ಯ ನಾಲಾ ವಿಭಾಗ, ಮಂಡ್ಯ ಕಛೇರಿಯಲ್ಲಿ ದಿನಾಂಕ: 27.12.95 ರಿಂದ 17.6.98 ರವರೆಗೆ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಖರೀದಿ ಸಮಿತಿ ಅನುಮೋದನೆ ಪಡೆಯದೆ ನಿಯಮಾವಳಿಗಳಿಗೆ ವಿರುದ್ಧವಾಗಿ ಖರೀದಿ ಸಮಿತಿಯ ಒಪ್ಪಿಗೆ ಪಡೆಯದೇ ಒಟ್ಟು ಮೊತ್ತ ರೂ.45,71,825.00 ಮೌಲ್ಯದ ಸಾಮಗ್ರಿಗಳನ್ನು ಅಕ್ರಮವಾಗಿ ಖರೀದಿಸಿರುವ ಆರೋಪಗಳಿಗಾಗಿ ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 31.3.2004ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 15.5.2004ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಎಸ್ಇಎನ್ 2004, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೈಸೂರು ಜಿಲ್ಲಾ ಪಂಚಾಯತ್, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕಾರ್ಯಪಾಲಕ ಇಂಜಿನಿಯರ್ (ವಿನ್ಯಾಸ) ಮುಖ್ಯ ಅಭಿಯಂತರರು (ನೀರಾವರಿ) ದಕ್ಷಿಣ ರವರ ಕಛೇರಿ, ಮೈಸೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 1262

**ವಿಷಯ:** ಶ್ರೀ ಎಸ್. ಸಣ್ಣಪ್ಪ, ಶ್ರೀ ಎಸ್.ಟಿ. ರುದ್ರಮುನಿಯಪ್ಪ, ನಿವೃತ್ತ ಕೆ.ಎಂ.ಎ.ಎಸ್. ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಎಸ್ಇಎನ್ 2004, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2005**

ಶ್ರೀ ಎಸ್. ಸಣ್ಣಪ್ಪ, ಶ್ರೀ ಎಸ್.ಟಿ. ರುದ್ರಮುನಿಯಪ್ಪ, ನಿವೃತ್ತ ಕೆ.ಎಂ.ಎ.ಎಸ್. ಅಧಿಕಾರಿಗಳು ಅವರುಗಳು ಚಿತ್ರದುರ್ಗ ನಗರಸಭೆಯಲ್ಲಿ ಪೌರಾಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿತ್ರದುರ್ಗ ತಾಲ್ಲೂಕಿನ ಆಶ್ರಯ ಯೋಜನೆಯಡಿ ಸರ್ವೇ ನಂ.68ರ ಜಮೀನನ್ನು ಸರ್ವೇ ನಂ.33/7ರ ಜಮೀನೆಂದು ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಆಶ್ರಯ ಯೋಜನೆಯಡಿಯಲ್ಲಿ ಜಮೀನಿನ ಮಾಲೀಕರಿಗೆ ರೂ.11.00 ಲಕ್ಷ ಹಣ ನೀಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿ ಆ ಮೂಲಕ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಸ್. ಸಣ್ಣಪ್ಪ ಮತ್ತು ಶ್ರೀ ಎಸ್.ಟಿ. ರುದ್ರಮುನಿಯಪ್ಪ ನಿವೃತ್ತ ಕೆ.ಎಂ.ಎ.ಎಸ್. ಅಧಿಕಾರಿಗಳು ಅವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ಸಣ್ಣಪ್ಪ ಮತ್ತು ಶ್ರೀ ಎಸ್.ಟಿ. ರುದ್ರಮುನಿಯಪ್ಪ ನಿವೃತ್ತ ಕೆ.ಎಂ.ಎ.ಎಸ್. ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1263

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## WATER RESOURCES SECRETARIAT

### ADDENDUM No. WRD 49 NPC 2005, Bangalore, Dated: 23rd August 2005

In the Notification No. WRD 49 NPC 2005 dated 3.8.2005 after "Limited" it may please be added and read as "in place of Shri K.K. Mishra"

By Order and in the Name of the Governor of Karnataka,

**S. SRIDHAR**

P.R. 1264

Officer on special Duty (Tech MMI-3) (I/C),
Water Resources Department.

## ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/CWEL/2005/1303 ದಿನಾಂಕ: 7/19.7.2005.

2) ದಿನಾಂಕ: 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Chiranjjeevi Wind Energy Ltd. ಕಂಪನಿಗೆ ಶಿವಮೊಗ್ಗ, ಬಳ್ಳಾರಿ, ಬೆಳಗಾಂ, ಹಾಸನ, ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು 132.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ 4 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 206 ಎನ್‌ಸಿಇ 2005, ಬೆಂಗಳೂರು, ದಿನಾಂಕ 21ನೇ ಸೆಪ್ಟೆಂಬರ್ 2005**

M/s Chiranjjeevi Wind Energy Ltd. ಕಂಪನಿಗೆ ಶಿವಮೊಗ್ಗ, ಬಳ್ಳಾರಿ, ಬೆಳಗಾಂ, ಹಾಸನ, ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು 132.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 2 | 3 | 4 |
| 1 | 7 MW | Halki, Malgali, Belgaum district. | A N-S oriented non-contiguous ridge situated on the North of Halki. The area is described as fairly dense scrub and is in the reserved forest. The proposed area is covered in the following Geographical co-ordinates:<br>**Latitude**: 15°55'41"- 15°58'40" N<br>**Longitude**: 74°55'20"- 74°56'22" E<br>**Peaks:** 779, 738m Amsl |
| 2 | 11.25 MW | Gangur, Chittanahalli, Chikmagalur and Hassan district. | Five ridges named as A, B, C, D, E, are located in a circular fashion on East of Gangur and Chittanahalli. The proposed area are covered in the following Geographical co-ordinates:<br>**Latitude**: 13°10'30"- 13°15'0" N<br>**Longitude**: 76°5'8"- 76°9'18" E<br>**Peaks:** 914, 1035, 1083, 1133, 1114m Amsl |

| 1 | 2 | 3 | 4 |
|---|---|---|---|
| 3 | 24.75 MW | Handralu, Kasturkoppalu, Madenahalli, Hiriyur, Kodihalli, Bandur, Chikmagalur and Hassan district. | Six non-contiguous and predominantly oriented in N-W and North direction and are identified as A, B, C, D, E and F. These ridges are located close by Handralu, Kasturkoppalu, Madenahalli, Hiriyur, Kodihalli, Bandur villages. The proposed areas are covered in the following Geographical co-ordinates:<br>**Latitude**: 13°15'0"- 13°22'40" N<br>**Longitude**: 76°3'42"- 76°12'45" E<br>**Peaks:** 885, 1016, 1162, 1152, 996, 1058, 1051, 889, 1018m Amsl |
| 4 | 4.5 MW | Narasettihalli, Honnanayakanahalli, Shimoga district. | A non-contiguous N-S oriented ridge is situated on the Narasettihalli and Honnanayakanahalli. The proposed area is covered in the following Geographical co-ordinates:<br>**Latitude**: 14°0'24"- 14°2'51" N<br>**Longitude**: 75°58'11"- 75°59'18" E<br>**Peaks:** 771, 754m Amsl |
| 5 | 3.75 MW | Hambalghatta, Bellary District. | An E-W oriented ridge is located on the N-W of Hambalghatta village and is described as open scrub and has 765m peak. The proposed area is covered in the following Geographical co-ordinates:<br>**Latitude**: 14°47'27"- 14°48'16" N<br>**Longitude**: 76°0'0" -76°1'31" E<br>**Peaks:** 765m Amsl |
| 6 | 53.25 MW | Anumanhalli, Kammaranahalli, Shimoga district. | Eight potential areas identified as A, B, C, D, E, F, G, H and are predominantly oriented in E-W direction and are situated in on both sides of Tungabhadra river and covered in Chitradurga, Dharwad, Shimoga district. These potential areas are located close by Anumanhalli, Kammaranahalli, Chikkagonigere, Hiregonigere, Malebennur, Rattihalli, Todakanahalli, Guddadamadapura, Kaginahalli, Somannana Mallapura villages. The proposed areas are is covered in the following Geographical co-ordinates:<br>**Latitude**: 14°15'0"- 14°23'32" N<br>**Longitude**: 75°30'0"- 75°45'0" E<br>**Peaks:** 743, 744, 748, 742, 760, 801, 765, 761, 697, 699, 598, 676, 714, 795, 637, 644, 672, 722, 704, 796, 861, 827, 805, 794, 766, 728, 739, 805, 758, 737, 742, 824, 779, 860, 824, 827, 800, 893, 824, 793m Amsl |
| 7 | 12.75 MW | Harmghatta, Mallapura Shimoga district. | Two independent non-contiguous areas are identified as 'A' & 'B' and are located on North of Harmghatta and S-W of Mallapura. The area 'A' is located in Karmaghatta State Forest & has 707, 758, 797, 746, 828, 824m peaks. Whereas area B is described as open scrub and has 671, 701, 635m peaks. The proposed areas are covered in the following Geographical co-ordinates:<br>**Latitude**: 14°0'0"- 14°5'55" N<br>**Longitude**: 75°37'16"- 75°44'18" E<br>**Peaks:** 771, 754m Amsl |

| 1 | 2 | 3 | 4 |
|---|---|---|---|
| 8 | 6 MW | Honnashettihalli, Baragehalli Tumkur district. | A NE & SW oriented non contiguous ridge located around 3.5Km on the N-E of Handakere village. The proposed area is in the Baragehalli State Forest. The potential area is held by the following geographical co-ordinates:<br>**Latitude**: 13°31'18"- 13°33'4" N<br>**Longitude**: 76°27'38"- 76°30'0" E<br>**Peaks:** 898, 812m Amsl |
| 9 | 9 MW | Mallenahalli, Gollarahatti, Rampur, Hassan district. | A large elevated plateau with N-S orientation is surrounded by two villages and this plateau has 874 and 858m peaks. The potential area is described as open scrub and contains boulders. The proposed area is covered in the following Geographical co-ordinates:<br>**Latitude**: 13°22'57"- 13°26'52" N<br>**Longitude**: 76°23'0"- 76°29'41" E<br>**Peaks:** 814, 858m Amsl |
| **Total** | **132.25 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್/ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. Further, the company has not mentioned the ownership details of the areas proposed including its encumbrances. In case the proposed land is already enjoyed by the other party is lawful. In such cases, the Government Order of Capacity Sanctioned would be limited to only sanction of Wind Power Capacity.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1341 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/MMCL/2005/709 ದಿನಾಂಕ: 8.4.2005.

2) ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Mysore Mercantile Co. Ltd. ಕಂಪನಿಗೆ ಬೆಳಗಾಂ ಜಿಲ್ಲೆಯ, ಗೋಕಾಕ್ ತಾಲ್ಲೂಕಿನ ನಾಭಾಪುರ ಗ್ರಾಮ (ಕನಗಾಂವ) ದಲ್ಲಿ ಒಟ್ಟು 10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ 1 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 108 ಎನ್‌ಸಿಇ 2005, ಬೆಂಗಳೂರು, ದಿನಾಂಕ 2ನೇ ಸೆಪ್ಟೆಂಬರ್ 2005**

M/s Mysore Mercantile Co. Ltd. ಕಂಪನಿಗೆ ಬೆಳಗಾಂ ಜಿಲ್ಲೆಯ, ಗೋಕಾಕ್ ತಾಲ್ಲೂಕಿನ ನಾಭಾಪುರ ಗ್ರಾಮದಲ್ಲಿ (ಕನಗಾಂವ) ಒಟ್ಟು 10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Capacity MW | Description of the Geographical area |
|---|---|---|
| 1 | 10MW | 2 Non contiguous plateaus are located on the East and North East of Nabapura village (kanagaon), Gokak Taluk, Belgaum District and are described as reserved forests. These 2 plateaus have 739,707,738 & 693 mtr peaks. The entire area is bounded by the Geographical coordinates as mentioned below:<br>Latitude –$16^0$ 0' 40"- 4' 35" N<br>Longitude-$74^0$ 51'- 52' 21"E<br>Peaks: 739,707,738 & 693 mtr elevation. |
| **Total** | **10MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1342 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಎಡ ದಂಡೆಗೆ ಹಮ್ಮಿಕೊಳ್ಳುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಡಿಇ 111 ಎನ್‌ಸಿಇ 2001, ದಿನಾಂಕ : 8.10.2001.
2) ಸರ್ಕಾರಿ ಆದೇಶ ಸಂಖ್ಯೆ : ಇಎನ್ 449 ಎನ್‌ಸಿಇ 2004, ದಿನಾಂಕ : 30.12.2004.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ / 06 / ಗೋಂಧಿ / 2005 / 1535, ದಿನಾಂಕ : 11.8.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆಸರ್ಸ್ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗೊಂಧಿ ಕಿರು ಜಲ ವಿದ್ಯುತ್ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ : ಡಿಇ 111 ಎನ್‌ಸಿಇ 2001 ದಿನಾಂಕ : 8.10.2001 ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಸಿದ್ಲಿಪುರ ಗ್ರಾಮದ ಬಳಿ ಗೊಂಧಿ ಅಣೆಕಟ್ಟಿನಲ್ಲಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಮೆಸರ್ಸ್ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಸದರಿ ಅಭಿವೃದ್ಧಿದಾರರು ಸದರಿ ಜಾಗದಲ್ಲಿ ಹೂಳು ತುಂಬಿ ಕಾರ್ಯನಿರತವಿಲ್ಲದ ಎಡದಂಡೆಯ ಕಾಲುವೆಯ ಸ್ಥಳವನ್ನು ಉಪಯೋಗಿಸಿ ಯೋಜನೆಯನ್ನು ಎಡದಂಡೆಯಲ್ಲಿ ಹಮ್ಮಿಕೊಳ್ಳಲು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 255 ಎನ್‌ಸಿಇ 2005, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2005**

ಮೆಸರ್ಸ್ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಸಿದ್ಲಿಪುರ ಗ್ರಾಮದ ಬಳಿ ಗೊಂಧಿ ಅಣೆಕಟ್ಟಿನ ಎಡದಂಡೆ ಕಾಲುವೆಯ ಜಾಗದಲ್ಲಿ ಹೂಳು ತುಂಬಿ ಕಾರ್ಯನಿರತವಿಲ್ಲದ ಸ್ಥಳವನ್ನು ಉಪಯೋಗಿಸಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಗೊಂಧಿ ಕಿರು ಜಲ ವಿದ್ಯುತ್ ಯೋಜನೆಯನ್ನು ಎಡದಂಡೆಯಲ್ಲಿ ಹಮ್ಮಿಕೊಳ್ಳಲು ಮುಂದಿನ ದಿನಗಳಲ್ಲಿ ಅಣೆಕಟ್ಟಿನ ಎಡದಂಡೆ ಕಾಲುವೆಯಲ್ಲಿ ನೀರನ್ನು ಹರಿಸುವ ಯೋಜನೆಯು ಬಂದರೆ, ಅದಕ್ಕೆ ಬೇಕಾಗಿರುವ ವ್ಯವಸ್ಥೆಯನ್ನು ಕಲ್ಪಿಸುವ ಸಂಪೂರ್ಣ ವೆಚ್ಚವನ್ನು ಅಭಿವೃದ್ಧಿದಾರರೇ ಭರಿಸಬೇಕು ಎಂಬ ಷರತ್ತಿಗೆ ಒಳಪಟ್ಟು 3 ಮೆಗಾ ವ್ಯಾಟ್ ಸಾಮರ್ಥ್ಯದ ಗೊಂಧಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅಣೆಕಟ್ಟಿನ ಎಡದಂಡೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1345 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:**
1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/MMCL/2005/1223 ದಿನಾಂಕ : 11/12.7.2005.
2) ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Mysore Mercantile Co. Ltd. ಕಂಪನಿಗೆ ಬೆಳಗಾಂ, ಬಳ್ಳಾರಿ, ಚಿತ್ರದುರ್ಗ, ಧಾರವಾಡ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಒಟ್ಟು 29.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ 2 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 204 ಎನ್‌ಸಿಇ 2005, ಬೆಂಗಳೂರು, ದಿನಾಂಕ 2ನೇ ಸೆಪ್ಟೆಂಬರ್ 2005**

M/s Mysore Mercantile Co. Ltd. ಕಂಪನಿಗೆ ಬೆಳಗಾಂ, ಬಳ್ಳಾರಿ, ಚಿತ್ರದುರ್ಗ, ಧಾರವಾಡ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಒಟ್ಟು 29.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed areas | Geographical area description of the project |
|---|---|---|---|
| 1 | 2 | 3 | 4 |
| 1 | 8 MW | Kutaranahatti, Kubaldinni (Hire Bidanur village), Savadatti Taluk, Belgaum district. | A large plateau oriented in E-W direction located on the North of Kubaldilli. The area is described as a dense scrub and is in Reserved Forest. The proposed area is covered in the following Geographical co-ordinates:<br>**Latitude**: 15°58'31"- 16°0'0" N<br>**Longitude**: 74°52'9"- 74°55'42" E<br>**Peaks:** 757, 754, 704m Amsl |
| 2 | 4 MW | Molakalmuru village & Taluk, Chitradurga District. | A complex terrain predominantly oriented in E-W direction is situated in the North of Molakalmuru. The area is described as open scrub is in Hireadavi State Forest. The proposed area is covered in the following Geographical co-ordinates:<br>**Latitude**: 14°43'4"- 14°45'0" N<br>**Longitude**: 76°43'9"- 76°48'7" E<br>**Peaks:** 921,744, 805m Amsl |
| | 2 MW | Konasagarr, Maralahalli & Niralahalli village, Molakalmur Tq., Chitradurga District. | A non-contiguous NW & SE oriented ridge located on the S-E of Maralahalli. The proposed area is covered in the following Geographical co-ordinates:<br>**Latitude**: 14°39'32"- 14°40'57" N<br>**Longitude**: 76°43'58"- 76°45'55" E<br>**Peaks:** 817, 836, 805m Amsl |
| 3 | 1 MW | Rakshi village, Hukkeri Tq., Belgaum District. | A small hillock oriented in E-W direction is situated between Hukkeri & Rakshi village. The proposed area is covered in the following Geographical co-ordinates:<br>**Latitude**: 16°14'8"- 16°15'0" N<br>**Longitude**: 74°37'24"- 74°38'41" E<br>**Peaks:** 717m Amsl |
| | 6 MW | Hosura & Honur village near Nirvanahatti village, Hukkeri Taluk, Belgaum District. | Five independent hillocks predominantly oriented in E-W direction and have situated between Honur and Nirvanhatti villages. The proposed area is covered in the following Geographical co-ordinates:<br>**Latitude**: 16°9'7"- 16°10'15" N<br>**Longitude**: 74°36'29"- 74°39'11" E<br>**Peaks:** 757, 759, 726m Amsl |
| 4 | 2 MW | Gojanur village near Laxmishwara, Shirahatti Tq, Gadag District. | A small narrow E-W oriented hillock located on the N-W of Gonur village. The proposed area is covered in the following Geographical co-ordinates:<br>**Latitude**: 15°11'8"- 15°11'38" N<br>**Longitude**: 75°28'47"- 75°30'0" E<br>**Peaks:** 748m Amsl |

| 1 | 2 | 3 | 4 |
|---|---|---|---|
| 5 | 2.5 MW | Haragapurgarh, Haragapur village near Sankeshwara Hukkeri Tq., Belgaum District. | Two independent E-W oriented hillock are situated on the East & West of HarghapurGarh village. The proposed area is covered in the following Geographical co-ordinates:<br>**Latitude**: 16°16'21"- 16°17'11" N<br>**Longitude**: 74°25'0"- 74°28'56" E<br>**Peaks:** 760, 808m Amsl |
| 6 | 4 MW | Venkatapura, Bukkasagara & Kanvi Timmapura villages, Hospet Tq., Bellary District. | A large circular plateau located on the E of Venkatapura & the proposed area is described as open scrub & cactus. The proposed area is covered in the following Geographical co-ordinates:<br>**Latitude**: 15°18'15"- 15°20'49" N<br>**Longitude**: 76°31'19"- 76°35'22" E<br>**Peaks:** 549, 563, 631, 657, 528m Amsl |
| **Total** | **29.5 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ಕಂದಾಯ/ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. Further, the company has not mentioned the ownership details of the areas proposed including its encumbrances. In case the proposed land is already enjoyed by the other party is lawful. In such

cases, the Government Order of Capacity Sanctioned would be limited to only sanction of Wind Power Capacity.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1346 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಸಾಗರ್ ಪವರ್ (ನೀರು ಕಟ್ಟೆ) ಪ್ರೈ. ಲಿ., ಕಂಪನಿಯ 12 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು 15 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 98, ದಿನಾಂಕ: 11.11.1998.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 338 ಎನ್‌ಸಿಇ 2004, ದಿನಾಂಕ: 12.10.2004.
3) ಸರ್ಕಾರಿ ಆದೇಶ ಸಂಖ್ಯೆ: ಇಂಇ 403 ಎನ್‌ಸಿಇ 2004, ದಿನಾಂಕ: 13.12.2004.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/ವೊಳಲುನೀರುಕಟ್ಟೆ/2005/1630, ದಿನಾಂಕ: 3.9.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆಸರ್ಸ್ ಸಾಗರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ನೀರುಕಟ್ಟೆ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ 15 ಮೆಗಾ ವ್ಯಾಟ್ ಸಾಮರ್ಥ್ಯದ ನೀರುಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಮೆಸರ್ಸ್ ಸಾಗರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆಸರ್ಸ್ ಸಾಗರ್ ಪವರ್ (ನೀರು ಕಟ್ಟೆ) ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲಾಗಿದೆ.

ಓದಲಾದ (3)ರ ಆದೇಶದಲ್ಲಿ ಹಂಚಿಕೆಯಾಗಿರುವ 15 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಸ್ಥಳೀಯ ಜಮೀನುಗಳು ಮುಳುಗಡೆಯಾಗುವ ಸಾಧ್ಯತೆ ಇರುವುದರಿಂದ 12 ಮೆಗಾ ವ್ಯಾಟ್‌ಗೆ ಮೊಟಕುಗೊಳಿಸಿ ಅನುಷ್ಠಾನ ಮಾಡಲು ಅನುಮತಿಸಲಾಗಿದೆ.

ಓದಲಾದ (4) ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಸದರಿ ಅಭಿವೃದ್ಧಿದಾರರು ಸದರಿ ಜಾಗದಲ್ಲಿ ಈ ಯೋಜನೆಯಿಂದಾಗಿ ಮುಳುಗಡೆಯಾಗುವ ಜಮೀನನ್ನು ಸಂಬಂಧಿತರಿಂದ ಖರೀದಿಸಿದ್ದು 15 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಹೆಚ್ಚಿಸಿದಲ್ಲಿ ಸ್ಥಳೀಯರಿಗೆ ಯಾವುದೇ ತೊಂದರೆಯಾಗುವುದಿಲ್ಲ ಎಂದು ತಿಳಿಸಿ 15 ರಿಂದ 12 ಮೆಗಾ ವ್ಯಾಟ್‌ಗೆ ತಗ್ಗಿಸಲಾದ ಸಾಮರ್ಥ್ಯವನ್ನು ಪುನಃ 15 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 24 ತಿಂಗಳುಗಳಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 256 ಎನ್‌ಸಿಇ 2005, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2005**

ಮೆಸರ್ಸ್ ಸಾಗರ್ ಪವರ್ (ನೀರು ಕಟ್ಟೆ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ನೀರುಕಟ್ಟೆ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 403 ಎನ್‌ಸಿಇ 2004, ದಿನಾಂಕ: 13.12.2004 ರಲ್ಲಿ ಅನುಮತಿಸಲಾಗಿರುವ 12 ಮೆಗಾ ವ್ಯಾಟ್ ಸಾಮರ್ಥ್ಯದ ನೀರುಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಈ ಯೋಜನೆ ಅನುಷ್ಠಾನದಿಂದ ಸ್ಥಳೀಯರಿಗೆ ಯಾವುದೇ ತೊಂದರೆಯಾಗಬಾರದೆಂಬ ಷರತ್ತನ್ನು ವಿಧಿಸಿ ಪುನಃ 15 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಲಾಗಿದೆ.

ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಧಿಯು ದಿನಾಂಕ: 30.8.2005 ರಂದು ಕೊನೆಗೊಳ್ಳುವುದರಿಂದ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 24 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1343 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಅಂಕೋಲಾ ತಾಲ್ಲೂಕು ಅವರ್ಸಾ ಗ್ರಾಮದ ಶ್ರೀ ವಿಠೋಬಾ ಮತ್ತು ಶ್ರೀ ಗಣಪತಿ ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಕಂಇ 77 ಮುಸೇವಿ 2003, ದಿನಾಂಕ: 30.4.2003.
2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪ ಶಾಸನ:ಸಿಆರ್:26:03-04, ದಿನಾಂಕ: 5.2.2004 ಮತ್ತು 18.10.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಯೆಂದು ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆ ಅಂಕೋಲಾ ತಾ. ಅವರ್ಸಾ ಗ್ರಾಮದ ಶ್ರೀ ಗಣಪತಿ ಮತ್ತು ಶ್ರೀ ವಿಠೋಬಾ ದೇವಸ್ಥಾನಗಳನ್ನು ಹಿಂದೂ ದೈವಜ್ಞ ಬ್ರಾಹ್ಮಣ ಸಮಾಜದವರಿಂದಲೇ ಸ್ಥಾಪಿತವಾಗಿದ್ದು ಅದೇ ಸಮಾಜದವರೇ ಪೂಜೆ ಆಡಳಿತ ನಿರ್ವಹಿಸುತ್ತಿರುವುದರಿಂದ ಉತ್ತರ ಕನ್ನಡ ಜಿಲ್ಲಾಧಿಕಾರಿಗಳು ಹಾಗೂ ಧಾರ್ಮಿಕ ದತ್ತಿ ಆಯುಕ್ತರು ಪ್ರಸ್ತುತ ದೇವಸ್ಥಾನಗಳನ್ನು ಅಧಿಸೂಚಿತ ಪಟ್ಟಿಯಿಂದ ಕೈಬಿಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 29 ಮುಆಬಿ 2004, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆ ಮತ್ತು ಧರ್ಮ ದತ್ತಿ ಅಧಿನಿಯಮ 1997ರ ಅಧಿನಿಯಮ 1 ಉಪನಿಯಮ 4(ii)ರ ಪ್ರಕಾರ "ಒಂದು ಹಿಂದೂ ಕುಟುಂಬವು ಸ್ಥಾಪಿಸಿ ವ್ಯವಸ್ಥೆಗೊಳಿಸಿರುವ ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರವು ಹೊರಡಿಸಿರುವ ದಿನಾಂಕ: 30.4.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉತ್ತರ ಕನ್ನಡ ಜಿಲ್ಲೆ ಅಂಕೋಲಾ ತಾ. ಅವರ್ಸಾ ಗ್ರಾಮದ ಶ್ರೀ ಗಣಪತಿ ದೇವಸ್ಥಾನ ಮತ್ತು ಶ್ರೀ ವಿಠೋಬಾ ದೇವಸ್ಥಾನ ಕ್ರಮ ಸಂಖ್ಯೆ: 24 ಮತ್ತು 25 ಪುಟ ಸಂಖ್ಯೆ: 729 ರಲ್ಲಿನ ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1294 ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಡಿಪ್ಲೋಮಾ : ಪದವೀಧರ ಇಂಜಿನಿಯರ್ (ಎಂಆರ್ಇ) (ಪ.ಜಾ : ಪ.ಪಂ.) ಇವರುಗಳನ್ನು ದಿನಗೂಲಿ ಸೇವೆಗೆ ಸೇರಿದ ದಿನಾಂಕದಿಂದ ಹತ್ತು ವರ್ಷಗಳು ಪೂರೈಸಿದ ಮಾರನೆಯ ದಿನಾಂಕದಿಂದ ಸೇವೆಯಲ್ಲಿ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಪತ್ರ ಸಂಖ್ಯೆ:ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95, ದಿಃ 2.7.94, 1.9.95 ಮತ್ತು 13.9.95.
2) ಸರ್ಕಾರದ ಆದೇಶ ಸಂ: ಲೋಇ 50 ಪಿಡಬ್ಲುಸಿ 2003 ದಿ: 8.7.04
3) ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94
4) ಸರ್ಕಾರದ ಆದೇಶ ಸಂ: ಲೋಇ 32 ಪಿಡಬ್ಲುಸಿ 95 ದಿ: 10.7.96.
5) ಸರ್ಕಾರದ ಆದೇಶ ಸಂ: ಲೋಇ 92 ಪಿಡಬ್ಲುಸಿ 95(ಪಿ) ದಿ: 20.8.96.
6) ಸರ್ಕಾರದ ಆದೇಶ ಸಂ: ಲೋಇ 32 ಪಿಡಬ್ಲುಸಿ 95(ಪಿ) ದಿ: 20.8.96.
7) ಸರ್ಕಾರದ ಆದೇಶ ಸಂ: ಲೋಇ 67 ಪಿಡಬ್ಲುಸಿ 96 ದಿ: 1.1.97.
8) ಸರ್ಕಾರದ ಆದೇಶ ಸಂ: ಲೋಇ 670 ಪಿಡಬ್ಲುಸಿ 96 ದಿ: 1.9.97.
9) ಸರ್ಕಾರದ ಆದೇಶ ಸಂ: ಲೋಇ 44 ಪಿಡಬ್ಲುಸಿ 99 ದಿ: 5.5.99.
10) ಸರ್ಕಾರದ ಆದೇಶ ಸಂ: ಲೋಇ 73 ಪಿಡಬ್ಲುಸಿ 99 ದಿ: 14.7.99.
11) ಸರ್ಕಾರದ ಆದೇಶ ಸಂ: ಲೋಇ 83 ಪಿಡಬ್ಲುಸಿ 99 ದಿ: 7.8.99.
12) ಸರ್ಕಾರದ ಆದೇಶ ಸಂ: ಲೋಇ 113 ಪಿಡಬ್ಲುಸಿ 99 ದಿ: 6.12.99.
13) ಸರ್ಕಾರದ ಆದೇಶ ಸಂ: ಲೋಇ 9 ಪಿಡಬ್ಲುಸಿ 2000 ದಿ: 8.2.2000.
14) ಮು.ಇಂ. ಗ್ರಾಅಇಂಇ, ಬೆಂಗಳೂರುರವರ ಪತ್ರ ಸಂ:ಮುಇಂ:ಗ್ರಾಅಇಇ:ಸಿ–14(ಎ):2003–04/2580 ದಿ: 24.7.2003.
15) ಮು.ಇಂ. ಸಂಕ(ದ) ಬೆಂಗಳೂರುರವರ ಪತ್ರ ಸಂ: ಸಿಬಿಎನ್:145:ಇಎಸ್ ಎಂ::ದಿನೌಸೇ 2002–03 ದಿ: 13.8.2003.
16) ಮು.ಇಂ. ಸಂಕ(ದ) ಬೆಂಗಳೂರುರವರ ಪತ್ರ ಸಂ: ಸಿಬಿಎಸ್ 166:ಇಎಸ್ ಎಂ:ದಿನೌಸೇ 2003–04 ದಿ: 4.3.2004.
17) ಮು.ಇಂ. ಸಂಕ(ದ) ಬೆಂಗಳೂರುರವರ ಪತ್ರ ಸಂ: ಸಿಬಿಎನ್:178:ಇಎಸ್ ಎಂ: ದಿನೌಸೇ 2003–04 ದಿ: 9.3.04
18) ಮು.ಇಂ. ಸಂಕ(ಉ) ಧಾರವಾಡರವರ ಪತ್ರ ಸಂ: ಸಿಬಿಎನ್:ಸಿ–10:/ದಿನಗೂಲಿ: 38/2004–05/612 ದಿ: 30.4.2004
19) ಮು.ಇಂ. ಗ್ರಾಅಇಂಇ ಬೆಂಗಳೂರುರವರ ಪತ್ರ ಸಂ: ಮುಇಂ:ಗ್ರಾಅಇಂಇ:ಸಿ–14ಎ 2004–05/1374 ದಿ: 9.6.2004.
20) ಮು.ಇಂ. ಸಂಕ(ಉ)ಧಾರವಾಡರವರ ಪತ್ರ ಸಂ: ಸಿಬಿಎನ್:ಸಿ–10:ದಿನಗೂಲಿ:23:ಸಕ್ರಮ:2004–05/5332 ದಿನಾಂಕ 28.9.04
21) ಮು.ಇಂ. ಸಂಕ(ಉ)ಧಾರವಾಡರವರ ಪತ್ರ ಸಂ:ಸಿಬಿಎನ್: ಸಿ–10:ದಿನಗೂಲಿ :26: 2004–05/5333 ದಿ: 28.9.2004
22) ಮು.ಇಂ. ಗ್ರಾಅಇಂಇ, ಬೆಂಗಳೂರುರವರ ಪತ್ರ ಸಂ: ಮುಇಂ:ಗ್ರಾಅಇಂಇ: ಸಿ–14ಎ:2004–05/4410 ದಿನಾಂಕ 19.10.2004
23) ಮು.ಇಂ. ಸಂಕ(ದ) ಬೆಂಗಳೂರುರವರ ಪತ್ರ ಸಂ: ಸಿಬಿಎಸ್ 136:ಇಎಸ್ ಎಂ:ದಿನೌಸೇ 2003–04 ದಿ: 6.12.2004

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

2. ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರಿಂದ (13)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಅದರಂತೆ ಈ ಪದವೀಧರ : ಡಿಪ್ಲೋಮಾ ಇಂಜಿನಿಯರ್‌ಗಳ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ ಸರ್ಕಾರದ ವತಿಯಿಂದ ಕ್ರಮ ಕೈಗೊಳ್ಳಬಹುದಾಗಿದೆ.

3. ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಪತ್ರದಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ

ಇಂಜಿನಿಯರ್‌ಗಳನ್ನು ಕೋರಲಾಗಿತ್ತು. ಈ ಪೈಕಿ ಕ್ರಮ ಸಂಖ್ಯೆ: (14) ರಿಂದ (23)ರವರೆಗೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದ) ಬೆಂಗಳೂರು, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉ), ಧಾರವಾಡ, ಮತ್ತು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರುಗಳಿಂದ ಸ್ವೀಕೃತವಾದ ಪ್ರಸ್ತಾವನೆಗಳನ್ನು ಎಂದರೆ ಸಿ.ಆ.ಸು.ಇಲಾಖೆಯ ಆದೇಶ ಸಂಖ್ಯೆ: ಡಿಪಿಎಆರ್:13:ಎಸ್ಎಲ್‌ಸಿ 94 ದಿನಾಂಕ 29.9.94 ಮತ್ತು ಆದೇಶ ಸಂ: ಸಿಆಸುಇ 17 ಸೇಸ್ಥಅ 94 ದಿ: 20.10.94 ಹಾಗೂ ಮೇಲೆ ಓದಲಾದ (2)ರಿಂದ (13)ರಲ್ಲಿನ ಆದೇಶ / ಸುತ್ತೋಲೆಗಳಲ್ಲಿನ ನಿಬಂಧನೆಗಳನ್ವಯ ಮತ್ತು ಸರ್ಕಾರದ ಅಧಿಕೃತ ಜ್ಞಾಪನ ಸಂ: ಜಿಎಡಿ 11 ಎಸ್ ಬಿ ಎಸ್ 74 ದಿನಾಂಕ 11.7.1974ರ ಆದೇಶದ ಬೆಳಕಿನಡಿಯಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಸೇರಿದ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಒಟ್ಟು ಹನ್ನೊಂದು ಮಂದಿ ಪದವೀಧರ : ಡಿಪ್ಲೋಮಾ ಇಂಜಿನಿಯರ್‌ಗಳನ್ನು ಹಾಲಿ ಜಾರಿಯಲ್ಲಿರುವ ಆದೇಶ : ಸುತ್ತೋಲೆಗಳಲ್ಲಿನ ಎರಡು ಷರತ್ತುಗಳನ್ನು ಸಡಿಲಿಸಿದಂತೆ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ ಈ ಕೆಳಕಂಡಂತೆ ಪರಿಶೀಲಿಸಲಾಗಿದೆ.

4. ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಾಸಿಕ ವೇತನ ಇಂಜಿನಿಯರ್‌ಗಳು ತಮ್ಮ ದಿನಗೂಲಿ ಸೇವೆಯ ಅವಧಿಯಲ್ಲಿ ಅನಿವಾರ್ಯ ಕಾರಣಗಳಿಂದಾಗಿ ಸೇವೆಗೆ ಗೈರು ಹಾಜರಾದ ಅವಧಿಯನ್ನು 'ಡೈಸ್‌ನಾನ್' ಎಂದು ನಿರ್ಣಯಿಸಿ ಸದರಿ ಅವಧಿಯನ್ನು ನಿರಂತರ ಸೇವೆಯೆಂದು ಪರಿಗಣಿಸಲು ಹಾಗೂ 'ಕೋರ್ಸ್ ಕಂಪ್ಲೀಟೆಡ್' ದಿನಗೂಲಿ ಇಂಜಿನಿಯರ್‌ರೆಂದು ನೇಮಕಗೊಂಡಿರುವವರ ಪ್ರಕರಣಗಳಲ್ಲಿ ಅವರುಗಳು ವಿದ್ಯಾರ್ಹತೆಯನ್ನು ಪಡೆದ ದಿನಾಂಕದಿಂದ ಹತ್ತು ವರ್ಷಗಳ ಅವಧಿಯನ್ನು ಲೆಕ್ಕಾಚಾರ ಮಾಡಿ ಸಕ್ರಮಗೊಳಿಸುವ ಪದ್ಧತಿಯ ಬದಲಿಗೆ ಅವರುಗಳು ಮೂಲ ನೇಮಕಾತಿ ಹೊಂದಿದ : ಗೊತ್ತು ಮಾಡಲ್ಪಟ್ಟ ದಿನಾಂಕದಿಂದ ಹತ್ತು ವರ್ಷಗಳ ಅವಧಿಯನ್ನು ಲೆಕ್ಕಾಚಾರ ಮಾಡುವ ಬಗ್ಗೆ ಪರಿಗಣಿಸಿ, ಅದರಂತೆ ತಮ್ಮ ಸೇವೆಯನ್ನು ಸಕ್ರಮಗೊಳಿಸಬೇಕೆಂದು ಮನವಿ ಸಲ್ಲಿಸುತ್ತಾ, 1974ರಷ್ಟು ಹಿಂದೆಯೇ ಸಾಮಾಜಿಕ ನ್ಯಾಯತತ್ವದನ್ವಯ ಸರ್ಕಾರದ ಹಂತದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಸೇರಿದ ನೌಕರರ ಹಿತದೃಷ್ಟಿ ಬಗ್ಗೆ ಸರ್ಕಾರ ತಳೆದಿರುವ ನಿಲುವಿನಂತೆ ತಮ್ಮ ಪ್ರಕರಣಗಳನ್ನು ಮಾನವೀಯತೆ ನೆಲಗಟ್ಟಿನಲ್ಲಿ ನಿರ್ಧರಿಸುವಂತೆ ಕೋರಿರುತ್ತಾರೆ. ಅದರಂತೆ ಅವರುಗಳ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ.

5. ಸರ್ಕಾರವು ದಿ: 1.7.84ರ ನಂತರ ಹಾಗೂ 15.10.92ರೊಳಗೆ ದಿನಗೂಲಿ ಸೇವೆಗೆ ನೇಮಕಗೊಂಡ ಡಿಪ್ಲೋಮಾ : ಪದವೀಧರ ಇಂಜಿನಿಯರ್‌ಗಳ ಸೇವೆಯನ್ನು ಸಕ್ರಮಗೊಳಿಸುವ ಸಲುವಾಗಿ ದಿ: 29.9.94ರ ಆದೇಶ ಸಂ: ಡಿಪಿಎಆರ್ 13 ಎಸ್ಎಲ್‌ಸಿ 94ರಲ್ಲಿ ಸರ್ಕಾರವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯ ಲಾಭವನ್ನು ಪಡೆಯಲು, ಪ್ರಕರಣಗಳ 'ಕಟಾಫ್ ಡೇಟ್' 15.10.92 ಆಗಿರುತ್ತದೆ. ಎಂದರೆ ಮೇಲಿನ ಅವಧಿಯಲ್ಲಿ ನೇಮಕಗೊಂಡ ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ಗರಿಷ್ಟ ದಿನಾಂಕ 15.10.2002 ಆಗಿರುತ್ತದೆ. ಹೆಚ್ಚು ಸ್ಪಷ್ಟವಾಗಿ ಹೇಳುವುದಾದರೆ ಈ ಸಮಯಕ್ಕಾಗಲೇ ಸದರಿ ದಿನಗೂಲಿ ನೌಕರರ ಸೇವಾ ಸಕ್ರಮಕಾತಿ ಪ್ರಕ್ರಿಯೆ ಬಹುತೇಕ ಪೂರ್ಣಗೊಂಡಂತಾಗಿರುತ್ತದೆ. ಆದಾಗ್ಯೂ ಬಿಟ್ಟು ಹೋಗಿರುವ ಕೆಲವು ಪ್ರಕರಣಗಳ ಪೈಕಿ, ಮೇಲೆ ಹೇಳಿದಂತೆ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಸೇರಿದ ಕೆಲವು ಪ್ರಕರಣಗಳು ಸರ್ಕಾರದ ಹಂತದಲ್ಲಿ ಬಾಕಿ ಇರುತ್ತವೆ. ಮೇಲಿನ ನಿಯಮಾನುಸಾರ ಇವರುಗಳು ದಿನಾಂಕ 15.10.92ರೊಳಗೆ ದಿನಗೂಲಿ ಇಂಜಿನಿಯರ್‌ರಾಗಿ ಗೊತ್ತು ಮಾಡಲ್ಪಟ್ಟಿರುವುದರಿಂದ ದಿ: 15.10.02ಕ್ಕೆ ಸೇವಾ ಸಕ್ರಮಾತಿಗೆ ಇವರು ಅರ್ಹತೆಯನ್ನು ಪಡೆಯಬಹುದಾಗಿರುತ್ತದೆ. ಈ ಕುರಿತು ಮುಂದೆ ವಿವರವಾಗಿ ಚರ್ಚಿಸಿರುವಂತೆ ಇಂತಹ ಪ್ರಕರಣಗಳನ್ನು ಸಕ್ರಮಗೊಳಿಸುವಲ್ಲಿ ಎರಡು ಷರತ್ತುಗಳು ಅಡ್ಡಿ ಬರುತ್ತಿರುವುದನ್ನು ಗಮನಿಸಲಾಗಿದೆ. ಅವುಗಳೆಂದರೆ, ಮೊದಲನೆಯದು ಹತ್ತು ವರ್ಷಗಳ ನಿರಂತರ ಸೇವೆ, ಎರಡನೆಯದು, ಮೂಲ ನೇಮಕಾತಿ ದಿನಾಂಕ ಹಿಡಿದುಕೊಂಡಂತೆ ಹತ್ತು ವರ್ಷಗಳ ಸೇವೆಯನ್ನು ಗಣನೆಗೆ ತೆಗೆದುಕೊಳ್ಳದೆ ಡಿಪ್ಲೋಮಾ : ಪದವಿಯಲ್ಲಿ ಉತ್ತೀರ್ಣರಾದ ದಿನಾಂಕದಿಂದ ಈ ಅವಧಿಯನ್ನು ಪರಿಗಣಿಸುತ್ತಿರುವುದು.

6. ವಿದ್ಯಾರ್ಹತೆಯ ದಿನಾಂಕವನ್ನು ಗಣನೆಗೆ ತೆಗೆದುಕೊಳ್ಳುವ ಬಗ್ಗೆ ಹೇಳುವುದಾದರೆ ಮೇಲಿನಂತೆ 'ಕೋರ್ಸ್ ಕಂಪ್ಲೀಟೆಡ್' ಆಗಿ ದಿನಗೂಲಿ ಡಿಪ್ಲೋಮಾ : ಪದವೀಧರ ಇಂಜಿನಿಯರ್ ಎಂದು ನೇಮಕಗೊಂಡಿರುವ ಡಿಪ್ಲೋಮಾ ; ಪದವೀಧರ ಇಂಜಿನಿಯರ್‌ಗಳು ಆ ಹುದ್ದೆಗೆ ನಿಗದಿಪಡಿಸಿದ ತಾಂತ್ರಿಕ ಅನುಭವ ಹೊಂದಿದ್ದು, ಅದನ್ನು ಅವರುಗಳು ಸದರಿ ಹುದ್ದೆಗಳಲ್ಲಿ ಯಶಸ್ವಿಯಾಗಿ ಹತ್ತು ವರ್ಷಗಳಿಗೂ ಹೆಚ್ಚು ಕಾಲ ನಿರ್ವಹಿಸಿರುವುದರಿಂದ, ತದನಂತರ ಎಂದರೆ ಸೇವಾ ಸಕ್ರಮಾತಿ ಪೂರ್ವದಲ್ಲಿ ಅವರುಗಳು ಡಿಪ್ಲೋಮಾ : ಪದವಿಗಳಲ್ಲಿ ಉತ್ತೀರ್ಣರಾದರೂ ಸಹಿತವಾಗಿ ಇವರ ಪ್ರಕರಣಗಳನ್ನು ಸಕ್ರಮಾತಿಗೆ ಪರಿಗಣಿಸಬೇಕಾದ ಅನಿವಾರ್ಯತೆ ಉಂಟಾಗಿದೆ ಎಂಬುದನ್ನು ಸರ್ಕಾರವು ಮನಗಂಡಿದೆ. ಏಕೆಂದರೆ ಇವರುಗಳು ನೇಮಕಗೊಂಡ (ಗೊತ್ತು ಮಾಡಲ್ಪಟ್ಟ) ಹುದ್ದೆಯಲ್ಲಿ ಹತ್ತು ವರ್ಷಗಳ ಸೇವೆಯನ್ನು ತೃಪ್ತಿಕರವಾಗಿ ಪೂರೈಸಿದ್ದರೂ ಸಹ ಈ ಅವಧಿಗೆ ಅವರು ಯಾವುದೇ ರೀತಿಯ ಸೇವಾ ಹಿರಿತನ ಹಾಗೂ ಆರ್ಥಿಕ ಸೌಲಭ್ಯವನ್ನು ಪಡೆಯುವಂತಿರಲಿಲ್ಲ. ಅಲ್ಲದೆ ಸರ್ಕಾರಿ ಸೇವೆಯ ಯಾವುದೇ ಕಾಯ್ದೆ : ನಿಯಮಗಳು ಈ ಅವಧಿಗೆ ನೇರವಾಗಿ ಅನ್ವಯವಾಗುವುದಿಲ್ಲವೆಂಬುದನ್ನು ಸಹ ಅಲ್ಲಗಳೆಯುವಂತಿಲ್ಲ. ಉಳಿದಂತೆ ಈಗಾಗಲೇ ಪ್ರಸ್ತುತ ಆದೇಶದ ಪ್ರಾರಂಭದಲ್ಲಿ ತಿಳಿಸಿರುವಂತೆ ಅನಿವಾರ್ಯ ಕಾರಣಗಳಿಗೆ ಎಂದರೆ ಮೇಲಿನಂತೆ ಗೊತ್ತು ಮಾಡಲ್ಪಟ್ಟ ದಿನಗೂಲಿ ಇಂಜಿನಿಯರ್‌ಗಳನ್ನು ವಿನಾಕಾರಣ ಸೇವೆಯಿಂದ ತೆಗೆದು ಹಾಕಿದ್ದರ ಪರಿಣಾಮವಾಗಿ ಅವರು ಸೇವೆಗೆ ಗೈರು ಹಾಜರಾದ ಅವಧಿಯನ್ನು ಮೊದಲಿಗೆ 'ಡೈಸ್‌ನಾನ್' (ಲೆಕ್ಕಕ್ಕಿಲ್ಲದ ಅವಧಿ ಆದರೆ ಸೇವಾಭಂಗವಲ್ಲ) ಎಂದು ಪರಿಗಣಿಸಿ ತದನಂತರ ಅದನ್ನು ನಿರಂತರ ಸೇವೆಯೆಂದು ಪರಿಗಣಿಸಬೇಕಾದ ಅನಿವಾರ್ಯತೆಯ ಸಂದರ್ಭವೂ ಸಹ ಸರ್ಕಾರಕ್ಕೆ ಮನದಟ್ಟಾಗಿರುತ್ತದೆ. ಸಾಂದರ್ಭಿಕವಾಗಿ ಹೇಳುವುದಾದರೆ, 'ಗಾಜಿಯಾಬಾದ್' ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪನ್ನು ಅನುಸರಿಸಿ ದಿನಗೂಲಿ ಡಿಪ್ಲೋಮಾ : ಪದವೀಧರ ಇಂಜಿನಿಯರ್‌ಗಳ ಸೇವೆಯನ್ನು ಮಾಸಿಕ ವೇತನ ಸಿಬ್ಬಂದಿಯಡಿ ತಂದು ಸಕ್ರಮಗೊಳಿಸುವ ಬಗ್ಗೆ ಸರ್ಕಾರಿ ಆದೇಶ ಸಂ: ಸಿಆಸುಇ 13 ಎಸ್ ಎಲ್ ಸಿ 94 ದಿನಾಂಕ 29.9.94 ಹಾಗೂ ಸಿಆಸುಇ 17 ಸೇಸ್ಥಅ 94 ದಿ: 20.10.94ರಲ್ಲಿ ಕೆಲವು ಷರತ್ತುಗಳನ್ನು ನಿಗದಿಪಡಿಸಲಾಗಿದ್ದು, ಅದರಂತೆ ಪ್ರಶ್ನಿತ ಪ್ರಕರಣಗಳಲ್ಲಿನ ಅಭ್ಯರ್ಥಿಗಳು ಬಹುತೇಕ ಷರತ್ತುಗಳನ್ನು ಪೂರೈಸಿರುತ್ತಾರೆ. ಆದರೆ 'ಡೈಸ್‌ನಾನ್' ಅವಧಿಯನ್ನು ನಿರಂತರ ಸೇವೆಯೆಂದು ಪರಿಗಣಿಸುವ ಹಾಗೂ ಹತ್ತು ವರ್ಷಗಳ ಸೇವೆಯನ್ನು ಪರಿಗಣಿಸುವಾಗ ಮೂಲ ನೇಮಕಾತಿ ದಿನಾಂಕವನ್ನು ಗಣನೆಗೆ ತೆಗೆದುಕೊಳ್ಳುವ ಒಂದೆರೆಡು ಷರತ್ತುಗಳನ್ನು ಸ್ವಲ್ಪಮಟ್ಟಿಗೆ ಅವರು ಪೂರೈಸಿದಂತಾಗಿರುವುದಿಲ್ಲ. ಆದುದರಿಂದ ಈ ಕೊರತೆಯನ್ನು ಮೇಲೆ ವಿವರಿಸಿದಂತೆ ಸರ್ಕಾರದ ಅಧಿಕೃತ ಜ್ಞಾಪನ ಸಂ: ಜಿಎಡಿ 11 ಎಸ್‌ಬಿಸಿ 74 ದಿ: 11.7.74ರಲ್ಲಿನ ಮಾರ್ಗದರ್ಶನದನ್ವಯ ಹಾಗೂ ಸಹಾನುಭೂತಿಯಿಂದ ನಿವಾರಿಸಲು ಸರ್ಕಾರವು ನಿರ್ಣಯ ಕೈಗೊಂಡಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 44 ಪಿಡಬ್ಲ್ಯುಸಿ 2004, ಬೆಂಗಳೂರು, ದಿನಾಂಕ 16ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94, ಸರ್ಕಾರಿ ಅದೇಶ ಸಂ: ಸಿಆಸುಇ 17 ಸೇಸ್ಥಅ 94 ದಿನಾಂಕ 20.10.94 ಹಾಗೂ ಸರ್ಕಾರದ ಅಧಿಕೃತ ಜ್ಞಾಪನ ಆದೇಶ ಸಂ: ಜಿಎಡಿ 11 ಎಸ್ ಬಿ ಎಸ್ 74 ದಿನಾಂಕ 11.7.1974ರ ಆದೇಶದ ಬೆಳಕಿನಡಿಯಲ್ಲಿ ಈ ಕೆಳಕಂಡ ಹನ್ನೊಂದು ಜನ ಪರಿಶಿಷ್ಟ ಜಾತಿ :ಪರಿಶಿಷ್ಟ ಪಂಗಡದ ಡಿಪ್ಲೋಮಾ : ಪದವೀಧರ ಇಂಜಿನಿಯರ್‌ಗಳಿಗೆ ಹಾಲಿ ಜಾರಿಯಲ್ಲಿರುವ ಆದೇಶ : ಸುತ್ತೋಲೆಗಳಲ್ಲಿನ ಕೆಲ ಷರತ್ತುಗಳನ್ನು ಎಂದರೆ ವಿದ್ಯಾರ್ಹತೆ ಮತ್ತು ಡೈಸ್‌ನಾನ್ ಅವಧಿ ಕುರಿತಂತೆ ಸಡಿಲಿಸಿ ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸೇವೆಯಲ್ಲಿ ಸಕ್ರಮಗೊಳಿಸಲಾಗಿದೆ. ಅವರುಗಳಲ್ಲಿ ಈ ಕೆಳಕಂಡ ಪದವೀಧರ : ಡಿಪ್ಲೋಮಾ ಇಂಜಿನಿಯರ್‌ಗಳ **'ಡೈಸ್‌ನಾನ್'** ಅವಧಿಯನ್ನು 'ನಿರಂತರ' ಸೇವೆಯೆಂದು ಪರಿಗಣಿಸಿ ಅವರವರ ಹೆಸರಿನ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

**ಅನುಬಂಧ-1**

| ಕ್ರ. ಸಂ | ಹೆಸರು ಮತ್ತು ಹುದ್ದೆ **ಶ್ರೀಯುತರು** | ಕೆಲಸ ನಿರ್ವಹಿಸುತ್ತಿರುವ ಸ್ಥಳ | ಬಿ.ಇ./ ಡಿಪ್ಲೋಮಾ ಇಂಜಿನಿಯರ್ ರಾಗಿ ದಿನಗೂಲಿಗೆ ನೇಮಕಗೊಂಡ ದಿನಾಂಕ | 10 ವರ್ಷ ಪೂರೈಸಿದ ದಿನಾಂಕ | ವಿದ್ಯಾರ್ಹತೆ ಪೂರ್ಣ ಗೊಳಿಸಿದ ದಿನಾಂಕ | ಡೈಸ್‌ನಾನ್ ಅವಧಿಯನ್ನು ನಿರಂತರ ಸೇವೆಯೆಂದು ಪರಿಗಣಿಸಿದಂತೆ ಹತ್ತು ವರ್ಷಗಳ ಸತತ ದಿನಗೂಲಿ ಸೇವೆಯ ಷರತ್ತನ್ನು ಸಡಿಲಿಸಿದ್ದು ಅದರಂತೆ ಇವರುಗಳನ್ನು ಸಕ್ರಮಗೊಳಿಸಿದ ದಿನಾಂಕ |
|---|---|---|---|---|---|---|
| 1 | ಬಾಬು ಪವಾರ್, ಪದವೀಧರ ಇಂಜಿನಿಯರ್. | ಜಿ.ಪಂ.ಇಂ. ಉ.ವಿ. ಆಳಂದ | 1.3.1992 | 1.3.2002 | ಡಿಸೆಂಬರ್ 1990 | 2.3.2002 (1.6.93ರಿಂದ 31.7.97ರವರೆಗಿನ ಅವಧಿ) |
| 2 | ಪ್ರಕಾಶ್ ಜಿ.ಎನ್. ಪದವೀಧರ ಇಂಜಿನಿಯರ್ | ಜಿ.ಪಂ.ಇಂ. ಉ.ವಿ. ಯಾದಗಿರಿ | 1.3.1990 | 1.3.2000 | ಡಿಸೆಂಬರ್ 1989 | 2.3.2000 (1.3.92ರಿಂದ 23.11.97ರವರೆಗಿನ ಅವಧಿ) |
| 3 | ಗೋಪಾಲ್ ಡಿಪ್ಲೋಮಾ ಇಂಜಿನಿಯರ್ | ಲೋಇ ಉಪ ವಿಭಾಗ, ಬಂಟ್ವಾಳ, ದ.ಕ. ಜಿಲ್ಲೆ | 6.8.1991 | 6.8.2001 | 9.9.1991 | 7.8.2001 (ದಿ: 19.9.93ರಿಂದ 18.3.98ರವರೆಗಿನ ಅವಧಿ) |
| 4 | ಎಲ್. ಗೋಪಾಲ್ ನಾಯಕ್, ಡಿಪ್ಲೋಮಾ ಇಂಜಿನಿಯರ್ | ಜಿ.ಪಂ.ಇಂ. ಉಪ ವಿಭಾಗ, ಹಡಗಲಿ | 26.10.90 | 26.10.2000 | 19.7.89 | 27.10.2000 (26.10.91ರಿಂದ 25.10.2000 ದವರೆಗೆ) |

ಮುಂದುವರಿದು, ಈ ಕೆಳಕಂಡ ಸದರಿ **ಪದವೀಧರ ಇಂಜಿನಿಯರ್**ಗಳು ನಿಗದಿತ ಅವಧಿಯೊಳಗೆ ಕೋರ್ಸ್ ಕಂಪ್ಲೀಟೆಡ್ ದಿನಗೂಲಿ ಸೇವೆಗೆ ಸೇರಿ ನಂತರ ವಿದ್ಯಾರ್ಹತೆ ಪಡೆದಿರುವ ಈ ಇಂಜಿನಿಯರ್‌ಗಳ ಸೇವೆಯನ್ನು ಸೇವೆಗೆ ಸೇರಿದ ದಿನಾಂಕದಿಂದ 10 ವರ್ಷ ಪೂರೈಸಿದ ಮಾರನೆಯ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

**ಅನುಬಂಧ-2**

| ಕ್ರ ಸಂ | ಹೆಸರು ಮತ್ತು ಹುದ್ದೆ **ಶ್ರೀಯುತರು** | ಕೆಲಸ ನಿರ್ವಹಿಸುತ್ತಿರುವ ಸ್ಥಳ | ಬಿ.ಇ./ ಡಿಪ್ಲೋಮಾ ಕೋರ್ಸ್ ಕಂಪ್ಲೀಟೆಡ್ ಆಗಿ ದಿನಗೂಲಿಗೆ ನೇಮಕ ಗೊಂಡ ದಿನಾಂಕ | 10 ವರ್ಷ ಪೂರೈಸಿದ ದಿನಾಂಕ | ವಿದ್ಯಾರ್ಹತೆ ಪೂರ್ಣ ಗೊಳಿಸಿದ ದಿನಾಂಕ | ದಿನಗೂಲಿ ಸೇವೆಗೆ ಸೇರಿದ ದಿನಾಂಕದಿಂದ 10 ವರ್ಷ ಪೂರ್ಣಗೊಳಿಸಿದ ದಿನಾಂಕಕ್ಕೆ ಸಕ್ರಮಗೊಳಿಸುವ ಬಗ್ಗೆ ಎಂದರೆ ಡಿಪ್ಲೋಮಾ : ಪದವಿ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ದಿನಾಂಕವನ್ನು ಪರಿಗಣಿಸಬೇಕಾದ ಷರತ್ತನ್ನು ಸಡಿಲಿಸಿದಂತೆ ಇವರುಗಳ ಸೇವೆಯನ್ನು ಸಕ್ರಮಗೊಳಿಸಲಾದ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ತಾರಾಸಿಂಗ್ ರಾಠೋಡ್, ತಂದೆ ಸೋಮಲಾ, ಪದವೀಧರ ಇಂಜಿನಿಯರ್ | ಗ್ರಾ.ಅ.ಇಂ. ಇಲಾಖೆ ಗುಲ್ಬರ್ಗಾ | 1.8.1992 | 1.8.2002 | ಜುಲೈ 1996 | 2.8.2002 |

| 1 | 2 | 3 | 4 | 5 | 6 | 7 |
|---|---|---|---|---|---|---|
| 2 | ಹೀರಾಸಿಂಗ್ ರಾಠೋಡ್, ಪದವೀಧರ ಇಂಜಿನಿಯರ್ | ಜಿ.ಪಂ.ಇಂ. ಉ.ವಿ. ಯಾದಗಿರಿ | 1.6.1992 | 1.6.2002 | ಸೆಪ್ಟಂಬರ್ 98 | 2.6.2002 |
| 3 | ರವಿ ಎಸ್. ಸೂರನ್, ಪದವೀಧರ ಇಂಜಿನಿಯರ್ | ಜಿಪಂಇಂ ಉ.ವಿ. ಆಳಂದ | 1.6.1992 | 1.6.2002 | ಜೂನ್ 95 | 2.6.2002 |
| 4 | ಶರಣಬಸಪ್ಪ ಚಂದಪ್ಪ ಪದವೀಧರ ಇಂಜಿನಿಯರ್ | ಜಿ.ಪಂ.ಇಂ.ಉ.ವಿ. ಅಫಜಲ ಪುರ್ | 16.9.1988 | 16.9.1998 | ಜನವರಿ 95 | 17.9.1998 |
| 5. | ಮಹದೇವ್ ಲಕ್ಷ್ಮಣ್ ರಾವ್ ಸಿಂಧೆ, ಪದವೀಧರ ಇಂಜಿನಿಯರ್ | ಲೋಇ ಉ.ವಿ. ನಂ.1, ಗುಲ್ಬರ್ಗಾ | 19.9.1991 | 19.9.2001 | ಜನವರಿ 94 | 20.9.2001 |
| 6. | ಚನ್ನಬಸಪ್ಪ ಮೆಕಾಲೆ, ಪದವೀಧರ ಇಂಜಿನಿಯರ್ | ಲೋಇ ಉ.ವಿ. ಯಾದಗಿರಿ | 1.5.1992 | 1.5.2002 | ಜುಲೈ 94 | 2.5.2002 |
| 7 | ಶಶಿಕಾಂತ್ ಮಳ್ಳಿ, ಪದವೀಧರ ಇಂಜಿನಿಯರ್ | ಲೋಇ ಉ.ವಿ. ಹುಮ್ನಾ ಬಾದ್, | 1.1.92 | 1.1.2002 | ಜುಲೈ 94 | 2.1.2002 |

ತತ್ಪರಿಣಾಮವಾಗಿ ಸದರಿ ಆದೇಶದಲ್ಲಿನ ಡಿಪ್ಲೋಮಾ : ಪದವೀಧರ ಇಂಜಿನಿಯರ್‌ಗಳು ದಿನಗೂಲಿಗೆ ಸೇರಿದ ದಿನಾಂಕದಿಂದ ಸಕ್ರಮಗೊಂಡ ದಿನಾಂಕದವರೆಗೆ ಯಾವುದೇ ಸೇವಾ ಹಿರಿತನ ಮತ್ತು ಆರ್ಥಿಕ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ ಹಾಗೂ ಸೇವಾ ಸಕ್ರಮಾತಿ ಹೊಂದಿದ ದಿನಾಂಕದಿಂದ ಇವರುಗಳು ಸೇವಾ ಹಿರಿತನ ಸೌಲಭ್ಯವನ್ನು ಮಾತ್ರ ಪಡೆಯುತ್ತಾರೆ.

ಸದರಿ ಆದೇಶವನ್ನು ಯಾವುದೇ ಕಾರಣಕ್ಕೂ ಮತ್ತಾವುದೇ ವರ್ಗದ ಲೋಕೋಪಯೋಗಿ : ನೀರಾವರಿ ಇಲಾಖೆಯ ದಿನಗೂಲಿ ಇಂಜಿನಿಯರ್‌ಗಳಿಗೆ ಪೂರ್ವ ನಿದರ್ಶನವೆಂದು ಪರಿಗಣಿಸತಕ್ಕದ್ದಲ್ಲ.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ, ಮೇಲ್ಕಂಡ ಪದವೀಧರ : ಡಿಪ್ಲೋಮಾ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದ) ಬೆಂಗಳೂರು : ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉ) ಧಾರವಾಡ ಮತ್ತು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರುಗಳ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರುಗಳು ಸಂಬಂಧಪಟ್ಟ ಮುಖ್ಯ ಇಂಜಿನಿಯರ್‌ಗಳಲ್ಲಿ ಕಾರ್ಯವರದಿ ಮಾಡುವುದು ಹಾಗೂ ಸದರಿ ಡಿಪ್ಲೋಮಾ : ಪದವೀಧರ ಇಂಜಿನಿಯರ್‌ಗಳನ್ನು ಸ್ಥಳ ನಿಯುಕ್ತಿಗೊಳಿಸುವುದಕ್ಕಿಂತ ಮುಂಚಿತವಾಗಿ ಇವರುಗಳ ಮೂಲ ಪ್ರಮಾಣ ಪತ್ರಗಳು ಹಾಗೂ ಎನ್ ಎಂ ಆರ್ ಓಚರ್ ಗಳನ್ನು ಮತ್ತೊಮ್ಮೆ ಪರಿಶೀಲಿಸತಕ್ಕದ್ದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶ ಮತ್ತು ಅಧಿಕೃತ ಜ್ಞಾಪನ ಸಂ: ಜಿಎಡಿ 11 ಎಸ್‌ಬಿಎಸ್ 74 ದಿ: 11.7.1974ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟರಸಪ್ಪ**

ಪಿ.ಆರ್. 1383 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಲೋಕೋಪಯೋಗಿ ಇಲಾಖೆ(ಸೇವೆಗಳು–ಸಿ)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಜಾಜಿನಗರ ಸಹಕಾರ ಸಂಘ ನಿಯಮಿತ, ಬೆಂಗಳೂರು ರವರ ಸಹಾಯಧನ ಮತ್ತು ಸಾಗಾಣಿಕೆ ವೆಚ್ಚದ ಬಿಲ್ಲುಗಳ ಪಾವತಿ ಮಾಡಲು ಕಾಲವಿಳಂಬ ವಿನಾಯಿತಿ ಮಂಜೂರಾತಿ ಮಾಡುವ ಕುರಿತು-ಅನುಮೋದನೆ.

**ಓದಲಾಗಿದೆ:** 1) ಆ.ನಾ.ಸ. ಆಯುಕ್ತರ ಪತ್ರ ಸಂಖ್ಯೆ: ಜನಿ:ಲೆಅ(ಉ).ಸಾ.ಸ.2000-01/86, ದಿನಾಂಕ: 04.07.2003.

2) ಅಪರ ನಿರ್ದೇಶಕರು, ಆ.ನಾ.ಸ. ಇಲಾಖೆ ರವರ ಪತ್ರ ಸಂಖ್ಯೆ: ಜನಿ:ಲೆಅ(ಉ)ಸ.ಸಾ.51/2004-05/134, ದಿನಾಂಕ: 07.01.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪ್ರಸ್ತಾವನೆಯಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ರವರು ರಾಜಾಜಿನಗರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇವರು ಜೂನ್, 98 ಮತ್ತು ಜುಲೈ, 98ರ ಮಾಹೆಗಳಲ್ಲಿ ಸಹಾಯಧನ ಮತ್ತು ಸಾಗಾಣಿಕೆ ವೆಚ್ಚದ ಬಿಲ್ಲುಗಳನ್ನು ಪಾವತಿ ಮಾಡಲು ಸಂಬಂಧಿಸಿದ ಕಛೇರಿಗೆ ತಡವಾಗಿ ಸಲ್ಲಿಸಿದ್ದು, ಆ ಹಿನ್ನಲೆಯಲ್ಲಿ ಸದರಿಯವರಿಂದ ಕಾರಣ ಕೇಳಿದ್ದು, ತತ್ಸಂಬಂಧದಲ್ಲಿ ಕಛೇರಿಯ ಕಾರ್ಯನಿರ್ವಾಹಕ ಸಿಬ್ಬಂದಿಗಳಲ್ಲಿ 1998ನೇ ಡಿಸೆಂಬರ್ ತಿಂಗಳಿಂದ ಸೀಮೆಎಣ್ಣೆ ಕೂಪನ್ ವಿತರಣೆ ಕಾರ್ಯದಲ್ಲಿ ನಿಯೋಜಿಸಿದ್ದರಿಂದ ಮೇಲ್ಕಂಡ ಬಿಲ್ಲುಗಳನ್ನು ಪರಿಶೀಲಿಸಿ ಕಛೇರಿಗೆ ಸಲ್ಲಿಸಲು ವಿಳಂಬವಾಗಿರುವುದನ್ನು ಪರಿಗಣಿಸಿ ತತ್ಸಂಬಂಧ ದಾಸ್ತಾನಿನಲ್ಲಿ ಹೊಂದಾಣಿಕೆ ಮಾಡಿ ಸರಿಪಡಿಸಿ ಕಳುಹಿಸಲು ಸಂಘದವರೇ ಹೊಣೆಗಾರರಾಗಿರುವುದರಿಂದ, ಮೇಲ್ಕಂಡ ಮೊತ್ತವನ್ನು ಆರ್ಥಿಕ ವರ್ಷ 2003-04ನೇ ಸಾಲಿನಲ್ಲಿ ಪಾವತಿ ಮಾಡಲು ಹೊಂದಾಣಿಕೆ ಮಾಡಿಕೊಳ್ಳಲು ಸರ್ಕಾರದಿಂದ ಕಾಲವಿಳಂಬ ವಿನಾಯಿತಿ ಮಂಜೂರಾತಿಯನ್ನು ಕೋರಿ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ನಿಯಮಾನುಸಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

### ಸರ್ಕಾರಿ ಆದೇಶ ಸಂಖ್ಯೆ: ಆನಾಸ 52 ಎಫ್‌ಸಿಎಸ್ 2003, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಜೂನ್, 98 ಮತ್ತು ಜುಲೈ 98ರ ಮಾಹೆಗಳಲ್ಲಿ ಆಹಾರಧಾನ್ಯಗಳ ಸಹಾಯಧನ ರೂ.95,519.00 (ತೊಂಭತ್ತೈದು ಸಾವಿರದ ಐದುನೂರ ಹತ್ತೊಂಭತ್ತು ರೂಪಾಯಿಗಳು ಮಾತ್ರ) ಮತ್ತು ಸಾಗಾಣಿಕೆ ವೆಚ್ಚ ರೂ.4,633.00 (ನಾಲ್ಕು ಸಾವಿರದ ಆರುನೂರ ಮೂವತ್ಮೂರು ರೂಪಾಯಿಗಳು ಮಾತ್ರ) ವನ್ನು ರಾಜಾಜಿನಗರ ಸಹಕಾರ ಸಂಘ ನಿಗಮ ಬೆಂಗಳೂರು ರವರಿಗೆ ಪಾವತಿ ಮಾಡಲು ಆಡಳಿತಾತ್ಮಕ

ನಿರ್ವಹಣೆ ಕಾರಣಗಳಿಂದ ಆದ ವಿಳಂಬವನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಟಿ 96, ದಿನಾಂಕ: 10.07.1996ರ ಕಂಡಿಕೆ-21 ರಲ್ಲಿ ಪ್ರತ್ಯಾಯೋಜಿಸಿದ ನನ್ನ ಆರ್ಥಿಕ ಅಧಿಕಾರದಡಿ ಪ್ರದತ್ತವಾಗಿರುವಂತೆ ಈ ಪ್ರಕರಣದಲ್ಲಿ ಕಾಲ ವಿಳಂಬ ವಿನಾಯಿತಿ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎನ್. ಶಾಂತಕುಮಾರಿ**

ಪಿ.ಆರ್. 1265 ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005–06 ರಿಂದ 2012–13 ರವರೆಗೆ ಅನುಷ್ಠಾನಗೊಳಿಸಲು ಇರುವ ರಾಜ್ಯಮಟ್ಟದ ಸಲಹಾ ಸಮಿತಿಯಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ರವರನ್ನು ವಿಶೇಷ ಆಹ್ವಾನಿತರಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂ: ಅಪಜೀ 108 ಎಫ್‌ಎಪಿ 2005, ದಿನಾಂಕ: 04–08–2005.
2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ಇವರ ಪತ್ರಸಂಖ್ಯೆ: ಡಿ/ವಜೀ/ಸಿಆರ್–24/2005–06, ದಿನಾಂಕ: 17–08–2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005–06 ರಿಂದ 2012–13 ರವರೆಗೆ ಅನುಷ್ಠಾನಗೊಳಿಸಲು ಇರುವ ಯೋಜನೆಯಲ್ಲಿ ಹಲವು ಪ್ರಮುಖ ವನ್ಯಜೀವಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಅನುಮೋದಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ವನ್ಯಜೀವಿ ಘಟಕಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆಯ ಬಗ್ಗೆ ಪರಿಶೀಲಿಸಿ ಅಭಿಪ್ರಾಯ/ಸಲಹೆಗಳನ್ನು ನೀಡಲು ವಿಶೇಷ ಅಧಿಕಾರಸ್ಥ ಸಮಿತಿಗೆ ಅನುಕೂಲವಾಗುವುದರಿಂದ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ಇವರು ತಮ್ಮನ್ನು ರಾಜ್ಯಮಟ್ಟದ ಸಲಹಾ ಸಮಿತಿಯಲ್ಲಿ ಸದಸ್ಯರನ್ನಾಗಿ ನೇಮಕ ಮಾಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಸದರಿ ಯೋಜನೆಯಲ್ಲಿ ವನ್ಯಜೀವಿ ಕಾರ್ಯಕ್ರಮಗಳನ್ನು ಜಾರಿಗೊಳಿಸಬೇಕಾಗಿರುವುದರಿಂದ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ಇವರನ್ನು ರಾಜ್ಯಮಟ್ಟದ ಸಲಹಾ ಸಮಿತಿಗೆ ಸಲಹೆಯನ್ನು ನೀಡಲು ವಿಶೇಷ ಆಹ್ವಾನಿತ ಸದಸ್ಯರನ್ನಾಗಿ ನೇಮಕ ಮಾಡಲು ಮೇಲೆ ಓದಲಾದ (1)ರ ಆದೇಶಕ್ಕೆ ***ಸೇರ್ಪಡೆ*** ಮಾಡಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ: ಅಪಜೀ 108 ಎಫ್‌ಎಪಿ 2005, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005–06 ರಿಂದ 2012–13 ರವರೆಗೆ ಅನುಷ್ಠಾನಗೊಳಿಸಲು ಇರುವ ರಾಜ್ಯಮಟ್ಟದ ಸಲಹಾ ಸಮಿತಿ ಮತ್ತು ವಿಶೇಷ ಅಧಿಕಾರಸ್ಥ ಸಮಿತಿಯಲ್ಲಿ ವನ್ಯಜೀವಿ ಘಟಕಕ್ಕೆ ಸಂಬಂಧಿಸಿದಂತೆ ಇರುವ ಪ್ರಸ್ತಾವನೆಗಳಿಗೆ ಸಲಹೆಯನ್ನು ನೀಡಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ಇವರನ್ನು "***ವಿಶೇಷ ಆಹ್ವಾನಿತರನ್ನಾಗಿ***" ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಆರ್. ವತ್ಸಲ**

ಪಿ.ಆರ್. 1384 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## FOREST,ECOLOGY AND ENVIRONMENT, SECRETARIAT

**Subject:** Diversion of 0.60 ha. of forest land for the purpose of providing of water supply to Sri Malai Mahadeshwara Temple from river Cauvery as source.

**Read:**
1) Letter No.A5(3)GFI.CR.4/03-04 dated 24/9/2003, of the Principal Chief Conservator of Forests, Bangalore.
2) Letter No. F©A/ 11.2/264/KAR/MISC/940 dated: 15/7/2004 of the Chief Conservator of Forests (Central), Bangalore.
3) Letter No.A5(7)GFL.CR.4/2005-06 dated: 14-7-2005 of the Principal Chief Conservator of Forests, Bangalore.
4) Letter No.F.No.11.9/98-FC dated: 3-1-2005 Guidelines of Government of India, Ministry of Environment and Forests, New Delhi.

**PREAMBLE:**

The Principal Chief Conservator of Forests, Bangalore vide letter read at (1) above has submitted a proposal for the diversion of 0.60 ha. of forest land in Kollegal Division for laying pipe line for supply of drinking water and the same was recommended to the Government of India. The proposal was for the total area of 0.90 ha. of forest land including 0.3 ha. forest land of Cauvery Wildlife Division. The Government of India considered the proposal and expressed its inability to approve the project since

some part of the project area falls within the Cauvery Wildlife Sanctuary(0.3 ha). The Government of India advised the State Government to obtain the approval from the Hon'ble Supreme Court of India and National Board of Wildlife(NBWL) for the area in the Wildlife Sanctuary.

The Principal Chief Conservator of Forests, Bangalore vide letter read at (3)above has submitted the proposal for the diversion of 0.60 ha. of forest land all along the road which is a part of the Kollegal Division in favour of Karnataka Urban Water Supply and Drainage Board, Mysore subject with certain conditions.

The Government of India, Ministry of Environment and Forests, New Delhi vide their letter dated 3.1.2005 read at (4) above conveyed its general approval under Section 2 of the Forest (Conservation)Act, 1980 for diversion of land to Government Departments for certain activities.

This proposal has been examined under the General instruction of Government of India in its letter dated: 3.1.2005 and it has been decided to accord sanction for utilizing an area of 0.60 ha. of forest land all along the road which is a part of the Kollegal Division in favour of KUWSDB.

**GOVERNMENT OREDER NO. FEE 34 FLL 2003, BANGALORE, DATED: 8th September 2005**

In the circumstances explained in the preamble and in accordance with the general approval of Government of India in the letter dated 3.1.2005, Government are pleased to accord approval under section (2) of Forest (Conservation) Act 1980 for diversion of 0.60 ha. of forest land all along the road which is a part of Kollegal Division in favour of Executive Engineer, KUWSDB, Mysore subject to the following conditions:

1. The legal status of forest land shall remain unchanged.
2. The lessee shall pay lease rent as fixed by the Government from time to time.
3. The lease is for a period of 20 years.
4. The leased out area should be used for the purpose for which it is granted. In case the land is not used for the stipulated purpose within two years or when it no longer needed for the stipulated purpose whichever is earlier, the area shall be forfeited to the Forest Department under section 82 of Karnataka Forest Act 1963. The Conservator of Forests, Chamarajanagar Circle, Chamarajanagar is authorized to take necessary action in this regard. No residential buildings shall be permitted in the proposed area.
5. The Karnataka Forest Act, 1963 and Rules, 1969 will be applicable for any violation.
6. Compensatory afforestation charges at twice the number of trees likely to be felled shall be recovered from user agency before the transfer of the land.
7. The user agency has to pay the Net Present Value(NPV) of forest land diverted under this proposal as per Government of Karnataka Order dated 17.1.2004 before the transfer of the land.
8. Trees shall be felled only when it becomes necessary and under strict supervision of State Forest Department.
9. The user agency shall pay the cost of extraction of trees if extraction is necessary, as estimated by the Department.
10. The user agency shall ensure that there should be no damage to the available wildlife.
11. The project site should be outside National Parks or Wildlife Sanctuary or Protected areas.
12. The user agency shall be responsible for any damage/injury to the flora/fauna in surroundings and therefore, shall take all possible measures to conserve the same.
13. The permission granted is subject to the monitoring by the concerned Regional Office of the Ministry of Environment and Forests.
14. The State Forest Department/State Government or the concerned Regional Office may impose from time to time any other condition in the interest of conservation, protection and development of forests.
15. Any other conditions to be imposed by the Government of India/Government of Karnataka/ Principal Chief Conservator of Forests, will be abided by the lessee.

By Order and in the Name of the Governor of Karnataka,

**S.R.VATSALA**

Under Secretary to Government,

Forest,Ecology and Environment Department.

P.R. 1297

**ಕಂದಾಯ ಸಚಿವಾಲಯ**

**ವಿಷಯ:** ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಕಂಇ 31 ಮುನೊಸೊ 2001, ದಿನಾಂಕ: 27-02-2004.
2) ಸರ್ಕಾರದ ಆದೇಶ ಸಂಖ್ಯೆ:ಕಂಇ 31 ಮುನೊಸೊ 2001, ದಿನಾಂಕ: 18-08-2004.
3) ಸರ್ಕಾರದ ಆದೇಶ ಸಂಖ್ಯೆ:ಕಂಇ 31 ಮುನೊಸೊ 2003, ದಿನಾಂಕ: 10-03-2004.
4) ಆಡಳಿತಾಧಿಕಾರಿಗಳು, ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ) ಗುಲ್ಬರ್ಗಾ ಇವರ ಪತ್ರ ಸಂಖ್ಯೆ:ಕಂದಾಯ/ಸಂಕೀರ್ಣ/45/04-05, ದಿನಾಂಕ:24-02-2005 ಮತ್ತು ಅರೆ ಸರ್ಕಾರಿ ಪತ್ರ ದಿನಾಂಕ: 21-04-2005.

**ಪ್ರಸ್ತಾವನೆ:**

ಮೇಲೆ ಓದಲಾದ -1 ರ ಸರ್ಕಾರಿ ಆದೇಶದಲ್ಲಿ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಯ ಆಡಳಿತ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ-27 ಎ ಪ್ರಕಾರ 6 ತಿಂಗಳ ಅವಧಿಗೆ ಉಪ ವಿಭಾಗಾಧಿಕಾರಿಗಳು ಬೀದರ್‌ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಅಧಿಕಾರಿಯವರು ಗುಲ್ಬರ್ಗಾದಿಂದ ಸುಮಾರು 120 ಕಿ.ಮೀ. ದೂರದಲ್ಲಿರುವುದರಿಂದ ಸಂಸ್ಥೆಯ ಕಾರ್ಯಕಲಾಪಗಳನ್ನು ನೋಡಿಕೊಳ್ಳಲು ಅನಾನುಕೂಲವುಂಟಾಗುತ್ತಿದ್ದುದರಿಂದ ಮೇಲೆ ಓದಲಾದ-2ರ ಸರ್ಕಾರಿ ಆದೇಶದಲ್ಲಿ ಉಪ ವಿಭಾಗಾಧಿಕಾರಿಗಳು ಬೀದರ್ ರವರ ಬದಲಿಗೆ ಉಪ ವಿಭಾಗಾಧಿಕಾರಿಗಳು ಗುಲ್ಬರ್ಗಾ ಉಪ ವಿಭಾಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗುತ್ತಿದ್ದು, ಮೇಲೆ ಓದಲಾದ-3 ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:26-08-2005 ಕ್ಕೆ ಮುಕ್ತಾಯಗೊಂಡಿರುತ್ತದೆ.

ಆಡಳಿತಾಧಿಕಾರಿಯವರು ಓದಲಾದ-4 ರ ಪತ್ರಗಳಲ್ಲಿ ಹಿಂದಿನ ಆಡಳಿತಾಧಿಕಾರಿಗಳಾದ ಸಹಾಯಕ ಆಯುಕ್ತರು, ಬೀದರ್‌ರವರಿಂದ ಸಂಸ್ಥೆಯ ಪ್ರಭಾರವಹಿಸಿಕೊಂಡು ಸದರಿಯವರ ಅಧೀನದಲ್ಲಿರುವ ದಾಖಲೆಗಳನ್ನು ಪರಿಶೀಲಿಸಲಾಗಿ ಸಂಸ್ಥೆಗೆ ಸಂಬಂಧಿಸಿದಂತೆ ಸಂಪೂರ್ಣ ದಾಖಲೆಗಳನ್ನು ಹಿಂದಿನ ಆಡಳಿತಾಧಿಕಾರಿಗಳು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳದೆ ಇರುವುದರಿಂದ ಮತ್ತು ಸಂಸ್ಥೆಯ ಹಿಂದಿನ ಅಧ್ಯಕ್ಷರಿಗೆ ಪತ್ರದ ಮೂಲಕ ಮತ್ತು ಮೌಖಿಕವಾಗಿ ಕೂಡ ಸಾಕಷ್ಟು ಸಲ ತಿಳಿಸಿದಾಗ್ಯೂ ಸಹ ಸದರಿಯವರು ಈವರೆಗೂ ದಾಖಲೆಗಳನ್ನು ಸಲ್ಲಿಸಿರುವುದಿಲ್ಲವಾದ್ದರಿಂದ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವಂತೆಯೂ ಮತ್ತು ಗುಲ್ಬರ್ಗಾ ಉಪ ವಿಭಾಗದ ಕಾರ್ಯವ್ಯಾಪ್ತಿಯಲ್ಲಿ ಚುನಾವಣಾ ಪ್ರಕ್ರಿಯೆಗಳು ಜರುಗುತ್ತಿರುವುದರಿಂದ ಅಗತ್ಯ ಕೆಲಸಗಳ ಒತ್ತಡದಿಂದಾಗಿ ಸಂಸ್ಥೆಯ ಕೆಲಸವನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಬೇರೆ ಅಧಿಕಾರಿಯನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಉಪ ವಿಭಾಗಾಧಿಕಾರಿಗಳು, ಗುಲ್ಬರ್ಗಾ ರವರ ಬದಲಿಗೆ ಉಪ ಕಾರ್ಯದರ್ಶಿಗಳು (ಆಡಳಿತ) ಜಿಲ್ಲಾ ಪಂಚಾಯತ್, ಗುಲ್ಬರ್ಗಾರವರನ್ನು ಮೇಲ್ಕಂಡ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಲು ಮತ್ತು ದಿನಾಂಕ:27-08-2005 ರಿಂದ 6 ತಿಂಗಳ ಅವಧಿಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 31 ಮುನೊಸೊ 2002, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ-27 ಎ ಪ್ರಕಾರ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ ರೋಜಾ (ಕೆ), ಗುಲ್ಬರ್ಗಾ, ಈ ಸಂಸ್ಥೆಗೆ ಮೇಲೆ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದ ಉಪ ವಿಭಾಗಾಧಿಕಾರಿಗಳು, ಗುಲ್ಬರ್ಗಾ ಉಪ ವಿಭಾಗ ರವರ ಬದಲಿಗೆ ಉಪ ಕಾರ್ಯದರ್ಶಿಗಳು (ಆಡಳಿತ) ಜಿಲ್ಲಾ ಪಂಚಾಯತ್, ಗುಲ್ಬರ್ಗಾರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:27-08-2005 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ನಿಯಮಾನುಸಾರ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಕೂಡಲೇ ಕಾರ್ಯಭಾರವಹಿಸಿಕೊಂಡು ಈ ಅವಧಿಯೊಳಗೆ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1344

**ವಿಷಯ:** ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಕಂಇ 70 ಮುನೊಸೊ 96, ದಿನಾಂಕ: 30-08-97.
2) ಸರ್ಕಾರಿ ಆದೇಶ ಸಂಖ್ಯೆ:ಕಂಇ 70 ಮುನೊಸೊ 96, ದಿನಾಂಕ: 04-09-2003.
3) ಆಡಳಿತಾಧಿಕಾರಿಗಳು, ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ, ತುಮಕೂರು ತಾಲ್ಲೂಕು ರವರ ಅ.ಸ. ಪತ್ರ ಸಂಖ್ಯೆ:ವ್ಯ/ವಿವ/10/04-05, ದಿನಾಂಕ:07-07-2005.

**ಪ್ರಸ್ತಾವನೆ:**

ಮೇಲೆ ಓದಲಾದ-1 ರ ಸರ್ಕಾರಿ ಆದೇಶದಲ್ಲಿ ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ, ತುಮಕೂರು ತಾಲ್ಲೂಕು, ಇದರ ಅವ್ಯವಹಾರಗಳನ್ನು ಸರಿಪಡಿಸಲು ತುಮಕೂರು ಉಪ ವಿಭಾಗದ, ಉಪ ವಿಭಾಗಾಧಿಕಾರಿಯವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದ್ದು, ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿರುತ್ತದೆ. ಕೊನೆಯದಾಗಿ ಮೇಲೆ-2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:31-08-2003 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ–3 ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ ಇವರು ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 11–01–2005 ರಂದು ನಡೆದ ಸಭೆಯ ನಡವಳಿಗಳ ನಿರ್ದೇಶನದಂತೆ ಕ್ರಮವಹಿಸಿ ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ, ಸಂಘದ ಸದಸ್ಯತ್ವ ಪಡೆಯಲಿಚ್ಛಿಸುವವರ ಕುರಿತು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆ ನೀಡಿ, ಬಂದಿರುವ ಅರ್ಜಿಗಳನ್ನು ಪರಿಶೀಲಿಸಿ ಸದಸ್ಯತ್ವ ಪಟ್ಟಿಯನ್ನು ಸಿದ್ಧಪಡಿಸಿ ಶಿಕ್ಷಣ ಇಲಾಖೆಯ ಸಹಭಾಗಿತ್ವದೊಂದಿಗೆ ದಿನಾಂಕ:07–05–2005 ರಂದು 2005–06ನೇ ಸಾಲಿಗೆ ಕಾರ್ಯಕಾರಿ ಸಮಿತಿ ರಚನೆಗಾಗಿ ಸಂಘದ ಸರ್ವ ಸದಸ್ಯರ ಸಭೆಯನ್ನು ಆಡಳಿತಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಕರೆಯಲಾಗಿತ್ತೆಂದೂ ತತ್ಸಂಬಂಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 6456/05 ದಾಖಲಾಗಿರುವುದರಿಂದ ಕಾರ್ಯಕಾರಿ ಸಮಿತಿ ರಚನೆ ಮಾಡದೆ ಉಳಿದ ವಿಷಯಗಳನ್ನು ಚರ್ಚಿಸಲಾಯಿತೆಂದು ವರದಿ ಮಾಡಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ ಈ ಸಂಘಕ್ಕೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 51 ಮುನೊಸೊ 2004, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ ಪ್ರಕಾರ ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 01–9–2003 ರಿಂದ 29–02–2004 ರ ವರೆಗೆ, 01–03–2004 ರಿಂದ 31–08–2004 ರ ವರೆಗೆ, 01–09–2004 ರಿಂದ 28–02–2005 ರ ವರೆಗೆ 01–03–2005 ರಿಂದ 31–08–2005 ರ ವರೆಗೆ ಮತ್ತು 01–09–2005 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಅಥವಾ ಸಂಘಕ್ಕೆ ನಿಯಮಾನುಸಾರ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ವಿಸ್ತರಿಸಿದ ಅವಧಿಯೊಳಗೆ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1353 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಸಿದ್ಧರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಚನ್ನಪಟ್ಟಣ ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಕಂಇ 50 ಮುನೊಸೊ 2002, ದಿನಾಂಕ: 21–04–2003.
2) ಸರ್ಕಾರಿ ಆದೇಶ ಸಂಖ್ಯೆ:ಕಂಇ 50 ಮುನೊಸೊ 2002, ದಿನಾಂಕ: 30–12–2003.
3) ಆಡಳಿತಾಧಿಕಾರಿಗಳು ಶ್ರೀ ಸಿದ್ಧರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಇವರ ಪತ್ರ ಸಂಖ್ಯೆ: ಎಸ್ಇಎಸ್/12/ 2005–06, ದಿನಾಂಕ: 30–05–2005.

**ಪ್ರಸ್ತಾವನೆ:**

ಮೇಲೆ ಓದಲಾದ–1ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿದ್ಧರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಸರಿದಾರಿಗೆ ತಂದು, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ಮೇಲೆ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದು, ಸದರಿ ಅವಧಿಯು ದಿನಾಂಕ:20–04–2004 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ–3 ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಸಂಸ್ಥೆಯ ಹಿಂದಿನ ಕಾರ್ಯದರ್ಶಿಗಳಿಗೆ ಮೇಲ್ಕಂಡ ಸಂಸ್ಥೆಯ ಲೆಕ್ಕಪತ್ರಗಳು ಹಾಗೂ ಸಂಬಂಧಿಸಿದ ದಾಖಲಾತಿಗಳನ್ನು ಸಲ್ಲಿಸುವಂತೆ ಸೂಚಿಸಿದಾಗ್ಯೂ, ಸಲ್ಲಿಸಿರುವುದಿಲ್ಲವಾದ್ದರಿಂದ ಸಂಸ್ಥೆಯಲ್ಲಿನ ಲೆಕ್ಕಪತ್ರ ಹಾಗೂ ಹಣಕಾಸಿನ ಅವ್ಯವಹಾರಗಳನ್ನು ನಿಯಮಾನುಸಾರ ಸರಿಪಡಿಸಿ ಚುನಾವಣೆ ನಡೆಸಬೇಕಿರುವುದರಿಂದ ಆಡಳಿತಾಧಿಕಾರಿ ಅವಧಿಯನ್ನು ಮನ: ವಿಸ್ತರಿಸುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 50 ಮುನೊಸೊ 2003, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿದ್ಧರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಈ ಸಂಘಕ್ಕೆ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ–27 ಎ ಪ್ರಕಾರ ನೇಮಕ ಮಾಡಲಾಗಿದ್ದ, ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ: 21–04–2004 ರಿಂದ 20–10–2004 ರ ವರೆಗೆ , 21–10–2004 ರಿಂದ 20–04–2005 ರ ವರೆಗೆ, ಮತ್ತು 21–04–2005 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಅಥವಾ ಸಂಸ್ಥೆಗೆ ನಿಯಮಾನುಸಾರ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ, ಸಂಘಕ್ಕೆ ನಿಯಮಾನುಸಾರ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1354 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿ ದೇವಸ್ಥಾನ ಅಭಿವೃದ್ಧಿ ಸಂಘ (ರಿ) ವಸಂತನಗರ, ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ:14/61–62, ದಿನಾಂಕ:18–01–2005.
2) ಸರ್ಕಾರದ ಸಮ ಸಂಖ್ಯೆ ದಿನಾಂಕ:26–04–2005 ರಲ್ಲಿ ಜಾರಿ ಮಾಡಿದ ಕಾರಣ ಕೇಳುವ ಸೂಚನಾ ಪತ್ರ.
3) ಅಧ್ಯಕ್ಷರು & ಕಾರ್ಯದರ್ಶಿ, ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿ ದೇವಸ್ಥಾನ ಅಭಿವೃದ್ಧಿ ಸಂಘ (ರಿ) ವಸಂತನಗರ, ಬೆಂಗಳೂರು ಇವರ ಲಿಖಿತ ಉತ್ತರದ ದಿನಾಂಕ:08–06–2005.
4) ಸರ್ಕಾರದ ಸಮ ಸಂಖ್ಯೆ ಪತ್ರ ದಿನಾಂಕ:20–06–2005.
5) ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ:14/61–62, ದಿನಾಂಕ:11/14–07–2005.

**ಪ್ರಸ್ತಾವನೆ:**

ಮೇಲೆ 1 ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿ ದೇವಸ್ಥಾನ ಅಭಿವೃದ್ಧಿ ಸಂಘ (ರಿ) ವಸಂತನಗರ, ಬೆಂಗಳೂರು ಈ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಪ್ರಕಾರ ನೋಂದಾಯಿಸಲ್ಪಟ್ಟಿದ್ದು, ನೋಂದಣಿ ಸಂಖ್ಯೆಯು 14/61–62 ಆಗಿರುತ್ತದೆ. ಸದರಿ ಸಂಘದ ಹಣಕಾಸಿನ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಬಂದ ದೂರಿನನ್ವಯ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ–25 ರ ಪ್ರಕಾರ ಜಿಲ್ಲಾ ನೋಂದಣಾಧಿಕಾರಿಗಳು ನಡೆಸಿದ ವಿಚಾರಣೆಯಲ್ಲಿ ಸಂಘವು ಕಾಯ್ದೆಯ ಕಲಂ 12 ನ್ನು ಉಲ್ಲಂಘಿಸಿ ಹಣಕಾಸಿನ ಅವ್ಯವಹಾರ ನಡೆಸಿರುವುದು ಕಂಡು ಬಂದಿರುವುದರಿಂದ, ಸಂಘದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಯವರ ವರದಿಯನ್ನು ಸರ್ಕಾರವು ಪರಿಶೀಲಿಸಿ ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿ ದೇವಸ್ಥಾನ ಅಭಿವೃದ್ಧಿ ಸಂಘ (ರಿ) ದ ಆಡಳಿತ ಮಂಡಳಿಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 12 ನ್ನು ಉಲ್ಲಂಘಿಸಿ, ಹಣಕಾಸಿನ ಅವ್ಯವಹಾರ ನಡೆಸಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಕಾಯ್ದೆಯ ಕಲಂ –27 ಎ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಮೇಲೆ – 2 ರಲ್ಲಿ ಓದಲಾದ ಸಮ ಸಂಖ್ಯೆ ದಿನಾಂಕ:26–04–2005ರಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಮೇಲೆ–3 ರ ಪತ್ರದಲ್ಲಿ ಸಲ್ಲಿಸಿದ ಲಿಖಿತ ಉತ್ತರದಲ್ಲಿ, ಸಂಘದಲ್ಲಿ ಯಾವುದೇ ತರಹದ ಹಣಕಾಸಿನ ಅವ್ಯವಹಾರ ನಡೆದಿರುವುದಿಲ್ಲ. ಸಂಘಕ್ಕೆ ಸಂಬಂಧಪಟ್ಟ 10 ವರ್ಷ ಎಂಟು ತಿಂಗಳ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧಕರಿಂದ ತಪಾಸಣೆ ಮಾಡಿದ ವರದಿಯನ್ನು ಈಗಾಗಲೇ ಜಿಲ್ಲಾ ನೋಂದಣಾಧಿಕಾರಿಯವರಿಗೆ ಕಳುಹಿಸಿಕೊಡಲಾಗಿದೆ. ಇದಕ್ಕೆ ಸಂಬಂಧಪಟ್ಟಂತೆ ತಕರಾರಿನ ವಿಚಾರ ನೋಂದಣಿ ಅಧಿಕಾರಿಗಳಿಂದ ಸಂಘಕ್ಕೆ ಬರದೇ ಇರುವುದರಿಂದ ಕಾಯ್ದೆಯ ಕಲಂ–12 ನ್ನು ಉಲ್ಲಂಘಿಸಿಲ್ಲವೆಂದು ಭಾವಿಸಲಾಗಿದೆ. ದೇವಸ್ಥಾನದ ಕಟ್ಟಡ ನಿರ್ಮಾಣದ ಕೆಲಸ ಸಂಪೂರ್ಣ ನಿಂತು ಹೋಗಿದ್ದು ಸದರಿ ಕೆಲಸವನ್ನು ಚುರುಕಾಗಿ ಮುಂದುವರಿಸಬೇಕಾಗಿದೆ. ಕಟ್ಟಡ ನಿರ್ಮಾಣ ಸಾಮಗ್ರಿಗಳನ್ನು ಸರಬರಾಜು ಮಾಡಿರುವ ಗುತ್ತಿಗೆದಾರರಿಗೂ, ಕಟ್ಟಡದ ಕೆತ್ತನೆಯ ಶಿಲ್ಪಿಗಳಿಗೂ ಹಣ ಬಾಕಿ ಇರುವ ಕಾರಣದಿಂದ ಸಾರ್ವಜನಿಕರು ಹಾಗೂ ದಾನಿಗಳ ಸಹಕಾರ ಅಗತ್ಯವಿದ್ದು ಈ ಕೆಲಸವನ್ನು ನಿರ್ವಹಿಸಲು ಆಡಳಿತಾಧಿಕಾರಿಗಳಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಆಡಳಿತಾಧಿಕಾರಿಯನ್ನು ನೇಮಿಸುವ ಪ್ರಸ್ತಾವನೆಯನ್ನು ಕೈಬಿಡಬೇಕೆಂದು ವಿನಂತಿಸಿರುತ್ತಾರೆ.

ಮೇಲೆ – 4ರಲ್ಲಿ ಓದಲಾದ ಸರ್ಕಾರದ ಸಮ ಸಂಖ್ಯೆ ಪತ್ರ ದಿನಾಂಕ:20–06–2005 ರಲ್ಲಿ ಮೇಲ್ಕಂಡ ಸದರಿ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ನೀಡಿರುವ ಲಿಖಿತ ಹೇಳಿಕೆಯ ಬಗ್ಗೆ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರ ಅಭಿಪ್ರಾಯ ಕೋರಲಾಗಿತ್ತು.

ಮೇಲೆ–5ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರು ಸಂಘದ ಆಡಳಿತ ಮಂಡಳಿಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ–13ರ ಪ್ರಕಾರ ದಿನಾಂಕ:31–12–2002 ರ ವರೆಗೆ ಲೆಕ್ಕಪತ್ರ ಹಾಗೂ ಕಾರ್ಯಕಾರಿ ಸಮಿತಿ ಪಟ್ಟಿ ದಾಖಲಿಸಲಾಗಿದೆ. ಸದರಿ ಸಾಲಿನ ಲೆಕ್ಕಪತ್ರದಲ್ಲಿ ದೇವಸ್ಥಾನ ಜೀರ್ಣೋದ್ಧಾರ ಕಾರ್ಯಕ್ಕೆ ವಸೂಲಾದ, ಖರ್ಚಾದ ಹಣದ ಬಗ್ಗೆ ಸರಿಯಾದ ಲೆಕ್ಕಪತ್ರ ಸಲ್ಲಿಸಿರುವುದಿಲ್ಲ. ಕಾರಣ ವಸಂತ ನಗರದಲ್ಲಿರುವ ಕೆನರಾ ಬ್ಯಾಂಕ್ ಶಾಖೆಯೂ ಸಹ ಸಂಘವು ಹೊಂದಿರುವ SB A/C.No. 8873 ನ್ನು ಸ್ಥಗಿತಗೊಳಿಸಿದೆ. ರೂ. 50.00 ಲಕ್ಷಗಳನ್ನು ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಉಪಯೋಗಿಸಿರುವುದಾಗಿ ಭಕ್ತಾಧಿಗಳ ಮನವಿಯಿಂದ ತಿಳಿದು ಬಂದಿರುತ್ತದೆ. ಆದರೆ ಸದರಿ ಮೊತ್ತವು ಸಂಘದ ಲೆಕ್ಕಪತ್ರದಲ್ಲಿ ದಾಖಲಾಗಿರುವುದಿಲ್ಲ. ಆದ್ದರಿಂದ ಸಂಘದಲ್ಲಿ ನಡೆದಿರುವ ಈ ಅವ್ಯವಹಾರವನ್ನು ಸರಿಪಡಿಸುವ ದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ–27 ಎ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಪುನ: ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ–1, 3 & 5 ನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 6 ಮುನೋಸೊ 2005, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಲಕ್ಷ್ಮೀವೆಂಕಟರಮಣ ಸ್ವಾಮಿ ದೇವಸ್ಥಾನ ಅಭಿವೃದ್ಧಿ ಸಂಘ (ರಿ), ವಸಂತ ನಗರ, ಬೆಂಗಳೂರು ಜಿಲ್ಲೆ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ (1) (ಸಿ) ಪ್ರಕಾರ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿ, ಉತ್ತರ ವಿಭಾಗ, ಬೆಂಗಳೂರು ಉತ್ತರ, ಬೆಂಗಳೂರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ನಿಯಮಾನುಸಾರ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಕೂಡಲೇ ಸಂಘದ ಕಾರ್ಯಭಾರವನ್ನು ವಹಿಸಿಕೊಂಡು, ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ನಿಗಧಿತ ಅವಧಿಯೊಳಗೆ ನಿಯಮಾನುಸಾರ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1355

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಮಹಮದ್ ಯೂಸುಫ್ ಖಾನ್, ಎಎಸ್‌ಐ ರವರು, ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ:20/ಸಿಬ್ಬಂದಿ/(4)ಶಿಕ್ಷೆ/ಡಿಇ/2001-02.ಓಬಿ ಸಂಖ್ಯೆ:642/02/03 ದಿನಾಂಕ:07-02-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/4/03-04 ಓಬಿ ಸಂಖ್ಯೆ :136/03-04. ದಿನಾಂಕ:26-02-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-11-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/70/2004. ದಿನಾಂಕ:21-06-2005 ಮತ್ತು 18-07-2005.

**ಪ್ರಸ್ತಾವನೆ:**

ಶ್ರೀ ಮಹಮ್ಮದ್ ಯೂಸೂಫ್, ಎಎಸ್‌ಐ, ಸರ್ಜಾಪುರ ಪೊಲೀಸ್ ಠಾಣೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಎಎಸ್‌ಐ ಮೊಹಮ್ಮದ್ ಯೂಸೂಫ್ ಖಾನ್ ಆದ ನೀವು ಸರ್ಜಾಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ದಿನಾಂಕ:28-08-2001ರಂದು ರಾತ್ರಿ ಗಸ್ತಿನ ಕರ್ತವ್ಯದಲ್ಲಿದ್ದಾಗ, ರಾತ್ರಿ 10-30 ಗಂಟೆ ಸಮಯದಲ್ಲಿ ಸರ್ಜಾಪುರ ಮಾರ್ಗವಾಗಿ ಬೆಳಗಾಂ ಕಡೆಗೆ ಹೊರಟಿದ್ದ ನಂ.MFC-212 ಅಂಬಾಸಿಡರ್ ಕಾರನ್ನು ತಡೆದು, ನಿಲ್ಲಿಸಿ, ಕಾರಿನಲ್ಲಿ ಏನಿದೆ ಎಂದು ಕಾರಿನಲ್ಲಿದ್ದ ಸಚಿನ್‌ಕುಮಾರ್, ರಾಜು ಪಾಟೀಲ್, ಅಂಕುಶ್ ರಜಪೂತ್ ರವರನ್ನು ಕೇಳಿದ್ದು, ಅವರು ಬೆಳ್ಳಿ ಒಡವೆಗಳನ್ನು ಬಿಲ್ ಸಹಿತ ತೋರಿಸಿದರೂ ಕೂಡ, ಅವರನ್ನು ಕುರಿತು ಈ ಬೆಲೆ ಸರಿಯಿಲ್ಲ, ನಿಮ್ಮನ್ನು ಲಾಕಪ್‌ಗೆ ಹಾಕುತ್ತೇನೆ, ಇಲ್ಲವೇ ರೂ.50,000/- ಕೊಡಿ ಎಂದು ಕೇಳಿದ್ದು, ಅವರು ಹಣ ಇಲ್ಲವೆಂದು ತಿಳಿಸಿದಾಗ, ಸಚಿನಕುಮಾರ್ ಮತ್ತು ರಾಜು ಪಟೇಲ್‌ರವರನ್ನು ಅಲ್ಲಿಯೇ ಸರ್ಜಾಪುರದಲ್ಲಿರುವ ಕೋದಂಡರಾಮ ದೇವಸ್ಥಾನದ ಬಳಿಯಿರುವ ಮನೆಯೊಂದರಲ್ಲಿ ಕೂಡಿ ಹಾಕಿ, ಅಂಕುಶ್ ರಜಪೂತ್‌ರವರನ್ನು ಹಣ ತರಲು ಬೆಂಗಳೂರಿಗೆ ಕಳುಹಿಸಿ, ಅವರಿಂದ ರೂ.30,000/- ಲಂಚ ಪಡೆದರೂ ಸಹ, ಅವರ ಬಳಿ ಇದ್ದ ಬೆಳ್ಳಿ ಒಡವೆಗಳಲ್ಲಿ, ಸುಮಾರು 8 ಕೆ.ಜಿ. ಒಡವೆಗಳನ್ನು ಕಿತ್ತುಕೊಂಡು, ಕರ್ತವ್ಯದಲ್ಲಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಅತೀವ ದುರ್ನಡತೆ ತೋರಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:07-02-2003ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಎಎಸ್‌ಐ ಹುದ್ದೆಯ ಕನಿಷ್ಟ ವೇತನಕ್ಕೆ ಮೂರು ವರ್ಷಗಳು ಇಳಿಸಿ, ತದನಂತರ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಪಡೆಯತಕ್ಕದೆಂಬ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:26-02-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಇಲಾಖೆಯಲ್ಲಿದ್ದು, ಸಾರ್ವಜನಿಕರಿಗೆ ರಕ್ಷಣೆ ಕೊಡಬೇಕಾಗಿರುವ ಒಬ್ಬ ಜವಾಬ್ದಾರಿಯುತ ಅಧಿಕಾರಿಯೇ ಈ ರೀತಿ ನಡೆದುಕೊಂಡಿರುವುದು ಪೊಲೀಸ್ ಇಲಾಖೆಗೆ ಕೆಟ್ಟ ಹೆಸರು ತಂದಿರುತ್ತದೆ. ಸಾರ್ವಜನಿಕರಿಗೆ ಪೊಲೀಸ್‌ರ ಬಗ್ಗೆ ನಂಬಿಕೆ ಇಲ್ಲದಿರುವಂತಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರೂ, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಇವರ ಉದ್ಧಟನತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 226 ಪೊಸಿಅ 2004 ಬೆಂಗಳೂರು ದಿನಾಂಕ: ಸೆಪ್ಟೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹಮ್ಮದ್ ಯೂಸೂಫ್ ಖಾನ್, ಎಎಸ್‌ಐ ಸರ್ಜಾಪುರ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ದಿನಾಂಕ:04-11-2004ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಗುಂಡೂರಾವ್**

ಪಿ.ಆರ್. 1336

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಸ್.ಕೆ.ಮಹಾದೇವ, ಮಾಜಿ ಪಿಸಿ 4628, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: ಡಿಇ/15/ಆರ್/6/ಇತರೆ/2001 ದಿನಾಂಕ:01-06-2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಆರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:ಬಿ/ಅಪೀಲು/2001/02 ಒಬಿ ಸಂಖ್ಯೆ:345/2002. ದಿನಾಂಕ:15-03-2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06-06-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/30/2002-03. ದಿನಾಂಕ:20-07-2004.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: PSC/35/CNS/2005. ದಿನಾಂಕ: 30-06-2005.

**ಪ್ರಸ್ತಾವನೆ:**

ಶ್ರೀ ಎಸ್.ಕೆ.ಮಹದೇವ ಮಾಜಿ ಪಿಸಿ 4628, ಬೆಂಗಳೂರು ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ಪಿಸಿ 4628, ಎಸ್.ಕೆ.ಮಹದೇವ, ವೈಯಾಲಿಕಾವಲ್ ಪೊಲೀಸ್ ಠಾಣೆ ಆದ ನೀವು ನಿಮ್ಮ ಹೆಂಡತಿ ಮಹಾದೇವಮ್ಮನಿಗೆ ಆಗಾಗ್ಗೆ ವರದಕ್ಷಿಣೆ ಕಿರುಕುಳ ನೀಡುತ್ತಿದ್ದು, ದಿನಾಂಕ:29-10-1997 ರಂದು ನಿಮ್ಮ ಹೆಂಡತಿಯನ್ನು ನಂಬಿಸಿ ಆಕೆಯ ತಂದೆಯ ಮನೆಯಿಂದ ಬನ್ನೇರಘಟ್ಟದ ಬಳಿ ಕರೆದುಕೊಂಡು ಹೋಗಿ ಜಗಳ ತೆಗೆದು ಸೌದೆ ಪಾಳಿನಿಂದ ನಿಮ್ಮ ಹೆಂಡತಿಗೆ ರಕ್ತಗಾಯವಾಗುವಂತೆ ಹೊಡೆದು ಸಂಜ್ಞೇಯ ಅಪರಾಧದಲ್ಲಿ ಭಾಗಿಯಾಗಿರುತ್ತೀರಿ.

2. ದಿನಾಂಕ:17-10-1997 ರಿಂದ 18-12-1997 ರವರೆಗೆ
ದಿನಾಂಕ:03-05-1997 ರಿಂದ 16-06-1997 ರವರೆಗೆ
ದಿನಾಂಕ:16-11-1995 ರಿಂದ 06-12-1995 ರವರೆಗೆ
ದಿನಾಂಕ:20-10-1996 ರಿಂದ 05-11-1996 ರವರೆಗೆ
ದಿನಾಂಕ:17-03-1997 ರಿಂದ 27-03-1997 ರವರೆಗೆ
ದಿನಾಂಕ:01-07-1997 ರಿಂದ 16-07-1997 ರವರೆಗೆ

ಅನಧಿಕೃತವಾಗಿ ಗೈರುಹಾಜರಾಗಿದ್ದು, ನೀವು ಚಾಳಿ ಗೈರುಹಾಜರಿ ಅಸಾಮಿಯಾಗಿದ್ದು, ಕರ್ತವ್ಯದಲ್ಲಿ ನಿಮ್ಮ ನಿರ್ಲಕ್ಷತೆ ಎತ್ತಿ ತೋರಿಸುತ್ತದೆ.

3. ಶಿಸ್ತು ಇಲಾಖೆಯಲ್ಲಿರುವ ನೀವು ಕರ್ತವ್ಯಕ್ಕೆ ಪದೇ ಪದೇ ಗೈರುಹಾಜರಾಗುವ ಹವ್ಯಾಸ ಹೊಂದಿ ಸಂಜ್ಞೇಯ ಅಪರಾಧಗಳಲ್ಲಿ ಭಾಗಿಯಾಗಿ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ ಕೇಂದ್ರ ವಿಭಾಗ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:01-06-2001ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಆರ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:15-03-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದು, ಶಿಸ್ತು ಪ್ರಾಧಿಕಾರಿಯು ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು, ಮಾನವೀಯತೆಯ ದೃಷ್ಟಿಯಿಂದ ಈ ಆದೇಶವನ್ನು ಮಾರ್ಪಡಿಸಿ, ಆರ್ಥಿಕವಾಗಿ ಸಂಕಷ್ಟದಲ್ಲಿರುವುದರಿಂದ ಅರ್ಜಿದಾರರನ್ನು ``ಕಡ್ಡಾಯ ನಿವೃತ್ತಿ`` ಗೊಳಿಸಲು ಉದ್ದೇಶಿಸಿ,

ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ:(5)ರಲ್ಲಿ ಪತ್ರ ಸಂಖ್ಯೆ:(5)ರಲ್ಲಿ ಓದಲಾದ ದಿನಾಂಕ:30-06-2005ರ ತನ್ನ ಪತ್ರದಲ್ಲಿ, ಅರ್ಜಿದಾರರು ಪೊಲೀಸ್ ಇಲಾಖೆಯಲ್ಲಿ ಸೇವೆಯಲ್ಲಿದ್ದು, ಪದೇ ಪದೇ ಗೈರುಹಾಜರಾಗಿರುವುದೂ, ವೈಯಕ್ತಿಕ ಜೀವನದಲ್ಲಿಯೂ ಸಹ ತನ್ನ ಹೆಂಡತಿಗೆ ವರದಕ್ಷಿಣೆ ಕಿರುಕುಳ ನೀಡಿ, ಆಕೆಯ ಮೇಲೆ ಹಿಂಸಾಚಾರ ಎಸಗಿ, ಮೃಗೀಯ ವರ್ತನೆ ಪ್ರದರ್ಶಿಸಿದ್ದು, ಆರೋಪ ಸಾಬೀತಾಗಿರುವ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿ ಸೇವೆಯಿಂದ ವಜಾ ಮಾಡಿದ ದಂಡನಾದೇಶವು ಸಮುಂಜಸವಾಗಿದೆ ಎಂದೂ, ಈ ಆದೇಶವನ್ನು ಮಾರ್ಪಡಿಸಲು ಯಾವುದೇ ಬಲವಾದ ಕಾರಣಗಳಿಲ್ಲದಿರುವುದರಿಂದ ಈ ಆದೇಶವನ್ನು ಮಾರ್ಪಡಿಸುವುದು ಸೂಕ್ತವಲ್ಲವೆಂದು ಅಭಿಪ್ರಾಯ ನೀಡಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 128 ಪೊಸಿಅ 2002 ಬೆಂಗಳೂರು ದಿನಾಂಕ: 21ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಕೆ.ಮಹದೇವ್ ಪಿಸಿ 4628, ಶೇಷಾದ್ರಿಪುರಂ ಪೊಲೀಸ್

ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ದಿನಾಂಕ:06-06-2002 ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 30-06-2005ರ ಅಭಿಪ್ರಾಯದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 1362

**ವಿಷಯ:** ಶ್ರೀ ನಿಂಗರಾಜು, ಮಾಜಿ ಎಪಿಸಿ 1605, ಸಿ.ಎ.ಆರ್. (ಕೇಂದ್ರ), ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿಎಆರ್ (ಕೇಂದ್ರ) ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/10/2002-03 ದಿನಾಂಕ:29-03-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ಇವರ ಆದೇಶ ಸಂಖ್ಯೆ:16/ಅಪೀಲು/2003-04. ದಿನಾಂಕ:19-08-2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:11-09-2003.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/78/2003-04. ದಿನಾಂಕ:06-01-2004.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: PSC/89/CNS/2005. ದಿನಾಂಕ: 29-08-2005.

**ಪ್ರಸ್ತಾವನೆ:**

ಶ್ರೀ ನಿಂಗರಾಜು ಮಾಜಿ ಎಪಿಸಿ 1605, ಸಿಎಆರ್ (ಕೇಂದ್ರ) ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಎಪಿಸಿ.1605, ನಿಂಗರಾಜು `ಡಿ` ವಿಭಾಗ, ಸಿಎಆರ್ (ಕೇಂದ್ರ), ಬೆಂಗಳೂರು ಆದ ನೀವು ದಿನಾಂಕ:09-04-2002ರಿಂದ ದಿನಾಂಕ:18-04-2002 ರವರೆಗೆ ಒಟ್ಟು 10 ದಿನಗಳು ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿರುತ್ತೀರಿ. ಅಲ್ಲದೇ ತಮ್ಮ 10 ವರ್ಷಗಳ ಸೇವೆಯ ಅವಧಿಯಲ್ಲಿ 61 ಬಾರಿ ಕರ್ತವ್ಯಕ್ಕೆ ಗೈರುಹಾಜರಾಗಿ ಒಬ್ಬ ಹವ್ಯಾಸಿ ಗೈರುಹಾಜರಿಯ ವ್ಯಕ್ತಿಯೂ ಸಹ ಆಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿಎಆರ್ (ಕೇಂದ್ರ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-03-03 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ ಮತ್ತು ಸಿಎಆರ್) ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:19-08-03ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 1994 ರಲ್ಲಿ ಸೇವೆಗೆ ಸೇರಿದ್ದು, 10 ವರ್ಷಗಳ ಅವಧಿಯಲ್ಲಿ ವಿವಿಧ ಬಾರಿ ವಿವಿಧ ಸಮಯಗಳಲ್ಲಿ 61 ಬಾರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ಶಿಸ್ತು ಪ್ರಾಧಿಕಾರಿಯು ಸಂದರ್ಭಗಳಿಗೆ ತಕ್ಕಂತೆ ಸುಮಾರು ಬಾರಿ ದಂಡನೆ ವಿಧಿಸಿದ್ದರೂ, ತಮ್ಮ ನಡೆತೆಯನ್ನು ಸರಿಪಡಿಸಿಕೊಳ್ಳದೆ, ಪದೇ ಪದೇ ಗೈರುಹಾಜರಿ ಆದ ಕಾರಣ ಶಿಸ್ತು ಪ್ರಾಧಿಕಾರಿ ಸೇವೆಯಿಂದ ವಜಾ ಮಾಡಿರುತ್ತಾರೆ. ಅರ್ಜಿದಾರರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದರೂ, ಇವರ ಕುಟುಂಬದ ಹಿತ ದೃಷ್ಟಿಯಿಂದ ಹಾಗೂ ದಂಡನೆ ವಿಧಿಸಿರುವ ಸಮಯದಲ್ಲಿ ಕೇವಲ 10 ದಿನಗಳ ಅನಧಿಕೃತ ಗೈರುಹಾಜರಿ ಆಗಿರುವ ಕಾರಣ, ಈ ಶಿಕ್ಷೆ ಹೆಚ್ಚಿನದಾಗಿರುತ್ತದೆ ಎಂದು ಭಾವಿಸಿ, ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಸೇವೆಯಿಂದ ವಜಾ ಮಾಡಿದ ಶಿಕ್ಷೆಗೆ ಬದಲಾಗಿ `ಸೇವೆಯಿಂದ ಕಡ್ಡಾಯ` ನಿವೃತ್ತಿಗೊಳಿಸುವ ಶಿಕ್ಷೆಯನ್ನು ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ:5ರಲ್ಲಿ ಓದಲಾದ ದಿನಾಂಕ:29-08-2005ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 13 ಪೊಸಿಅ 2004 ಬೆಂಗಳೂರು ದಿನಾಂಕ: 21ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:29-03-2003ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ನಿಂಗರಾಜು ಎಪಿಸಿ 1605, ಸಿಎಆರ್ (ಕೇಂದ್ರ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ, ಇವರನ್ನು ಸೇವೆಯಿಂದ ವಜಾ ಮಾಡಿದ ಶಿಕ್ಷೆಗೆ ಬದಲಾಗಿ `ಸೇವೆಯಿಂದ ಕಡ್ಡಾಯ ನಿವೃತ್ತಿ`

ಗೊಳಿಸುವ ಶಿಕ್ಷೆಯನ್ನು ವಿಧಿಸಲಾಗಿದೆ. ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ. ಶಿಸ್ತು ಪ್ರಾಧಿಕಾರಿಯ ಉಳಿದ ಆದೇಶದ ಅಂಶಗಳು ಅದೇ ರೀತಿ ಮುಂದುವರೆಯುತ್ತವೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 29-08-2005ರ ಪತ್ರದಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 1363

**ವಿಷಯ:** ಶ್ರೀ ನಂಜುಂಡಯ್ಯ, ಮಾಜಿ ಪಿಸಿ 1535, ಸಿಎಆರ್ (ಕೇಂದ್ರ) ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿಎಆರ್, ಕೇಂದ್ರ ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/60/2001-02. ಓಬಿ ಸಂಖ್ಯೆ: 41/2002. ದಿನಾಂಕ:01-04-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರ ಆದೇಶ ಸಂಖ್ಯೆ:13/ಅಪೀಲು/2003. ದಿನಾಂಕ:19-08-2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17-11-2003.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/90/2003-04. ದಿನಾಂಕ:22-07-2004.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: PSC/75/CNS/2005. ದಿನಾಂಕ:29-07-2004.

**ಪ್ರಸ್ತಾವನೆ:**

ಶ್ರೀ ನಂಜುಂಡಯ್ಯ ಮಾಜಿ ಪಿಸಿ 1535 ಸಿಎಆರ್ ಕೇಂದ್ರ ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಎಪಿಸಿ 1535, ನಂಜುಂಡಯ್ಯ, `ಬಿ` ವಿಭಾಗ, ಸಿಎಆರ್ (ಕೇಂದ್ರ), ಬೆಂಗಳೂರು ಆದ ನೀವು ದಿನಾಂಕ:13-01-2002 ರಿಂದ ದಿನಾಂಕ:01-02-2002 ರವರೆಗೆ ಒಟ್ಟು 20 ದಿನಗಳು ಕರ್ತವ್ಯಕ್ಕೆ ಅನಧೀಕೃತವಾಗಿ ಗೈರು ಹಾಜರಾಗಿರುತ್ತೀರಿ.

ಆರಕ್ಷಕ ಪೇದೆ 1535, ನಂಜುಂಡಯ್ಯ `ಬಿ` ವಿಭಾಗ, ಸಿಎಆರ್ (ಕೇಂದ್ರ), ಬೆಂಗಳೂರು ಆದ ನೀವು ಒಬ್ಬ ಜವಾಬ್ದಾರಿಯುತ ಪೇದೆಯಾಗಿದು, ನಿಮ್ಮ ಗೈರು ಹಾಜರಿಯ ಅವಧಿಯಲ್ಲಿ ಕಂಪನಿ ಆರ್.ಪಿ.ಐ.ರವರಿಗಾಗಲೀ ಅಥವಾ ಹಿರಿಯ ಅಧಿಕಾರಿಯವರಿಗಾಗಲೀ ವಿಷಯ ತಿಳಿಸದೆ ರಜೆ ಅಥವಾ ಸಿಕ್ ರಹದಾರಿ ಪತ್ರ ಪಡೆಯದೇ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮಿಷನರ್ ಆಫ್ ಪೊಲೀಸ್ ಸಿಎಆರ್ ಕೇಂದ್ರ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:01-04-2003ರ ಆದೇಶದಲ್ಲಿ ಅರ್ಜಿದಾರರಿಗೆ ಸೇವೆಯಿಂದ ವಜಾ ಮಾಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:19-08-2003 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಹವ್ಯಾಸಿ ಗೈರುಹಾಜರಾಗುವ ವ್ಯಕ್ತಿಯಾಗಿ ಅವರ ಸೇವಾ ಪುಸ್ತಕ ಪರಿಶೀಲಿಸಿದಾಗ ಕಂಡುಬರುತ್ತದೆ. ಅಂತೆಯೇ ಅವರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಬಲವಾದ ಸಮರ್ಥನೆ ಇರುವುದಿಲ್ಲ. ಆದರೂ, ಅರ್ಜಿದಾರರು 27-04-1984ರಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಸುಮಾರು 19 ವರ್ಷಗಳ ಸೇವೆ ಸಲ್ಲಿಸಿರುವುದನ್ನು ಹಾಗೂ ಅವರ ಕುಟುಂಬದವರ ನಿರ್ವಹಣೆ ದೃಷ್ಟಿಯಿಂದ ಇವರಿಗೆ ವಿಧಿಸಿರುವ `ಸೇವೆಯಿಂದ ವಜಾ ಮಾಡಿರುವ` ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, `ಕಡ್ಡಾಯ ನಿವೃತ್ತಿ` ಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ:5 ರಲ್ಲಿ ಓದಲಾದ ದಿನಾಂಕ:29-07-2005ರ ತನ್ನ ಪತ್ರದಲ್ಲಿ ಸರ್ಕಾರವು ಉದ್ದೇಶಿಸಿರುವ 'ಕಡ್ಡಾಯ ನಿವೃತ್ತಿ' ಗೊಳಿಸುವ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 251 ಪೊಸಿಅ 2004 ಬೆಂಗಳೂರು ದಿನಾಂಕ: 24ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 01.04.2003ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶಃ ಮಾರ್ಪಡಿಸಿ, ಶ್ರೀ ನಂಜುಂಡಯ್ಯ ಮಾಜಿ ಪಿಸಿ 1535, ಸಿಎಆರ್ ಕೇಂದ್ರ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 17.11.2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಶಿಸ್ತು ಪ್ರಾಧಿಕಾರಿ ಸೇವೆಯಿಂದ ವಜಾ ಮಾಡಿ ಹೊರಡಿಸಿದ ಆದೇಶವನ್ನು ಭಾಗಶಃ

ಮಾರ್ಪಡಿಸಿ ಇವರನ್ನು 'ಕಡ್ಡಾಯ ನಿವೃತ್ತಿಗೊಳಿಸಿದೆ' ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರತಕ್ಕದ್ದು. ಉಳಿದ ಅಂಶಗಳೆಲ್ಲಾ ಶಿಸ್ತು ಪ್ರಾಧಿಕಾರಿ ಆದೇಶದಲ್ಲಿರುವಂತೆಯೇ ಮುಂದುವರೆಯತಕ್ಕದ್ದು.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 29.07.2005ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 1378

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಬಿ.ಆರ್.ವಡ್ಡರ್, ಸಿಪಿಸಿ 575, ಬಿಜಾಪೂರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪೂರ ಇವರ ಆದೇಶ ಸಂಖ್ಯೆ:ಸಿಬ್ಬಂದಿ/3/ಸಿಆರ್ - 12/2001, ಓಬಿ ಸಂಖ್ಯೆ: 116/2002. ದಿನಾಂಕ:30-03-2002.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು/71/ಉವ/2003. ದಿನಾಂಕ:11-12-2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20-01-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/25/2005. ದಿನಾಂಕ:16-05-2005.

**ಪ್ರಸ್ತಾವನೆ:**

ಶ್ರೀ ಬಿ.ಆರ್.ವಡ್ಡರ, ಸಿಪಿಸಿ 575, ಬಿಜಾಪೂರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನೀವು ಸಿಪಿಸಿ ಬ.ನಂ-729 ಬಿ.ಆರ್.ವಡ್ಡರ ಮುದ್ದೇಬಿಹಾಳ ಪೊಲೀಸ್ ಠಾಣೆ ರವರು ದಿನಾಂಕ:08-07-01 ರಿಂದ 05-08-01 ರವರೆಗೆ ಹಾಗೂ ದಿನಾಂಕ:20-08-01 ರಿಂದ 03-09-01 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿದ್ದು ಅದೆ. ಅಲ್ಲದೇ ನೀವು ಈ ಹಿಂದೆ ದಿನಾಂಕ: 05-05-94 ರಿಂದ 09-05-94 ರವರೆಗೆ, 12-07-94 ರಿಂದ 15-07-94 ರವರೆಗೆ, 07-08-94 ರಿಂದ 09-08-94 ರವರೆಗೆ, 02-09-94 ರಿಂದ 05-09-94 ರವರೆಗೆ, 04-11-94 ರಿಂದ 08-11-94 ರವರೆಗೆ, 02-10-94 ರಿಂದ 10-10-94 ರವರೆಗೆ, 02-01-95 ರಿಂದ 09-01-95 ರವರೆಗೆ, 05-03-95 ರಿಂದ 21-03-95 ರವರೆಗೆ, 25-04-95 ರಿಂದ 26-05-95 ರವರೆಗೆ, 17-03-96 ರಿಂದ 30-03-96 ರವರೆಗೆ, 10-04-96 ರಿಂದ 11-04-96 ರವರೆಗೆ, 06-11-96 ರಿಂದ 13-11-96 ರವರೆಗೆ, 01-03-97 ರಿಂದ 07-03-97 ರವರೆಗೆ, 05-03-98 ರಿಂದ 08-04-98 ರವರೆಗೆ, 21-05-98 ರಿಂದ 04-06-98 ರವರೆಗೆ, 30-09-98 ರಿಂದ 13-10-98 ರವರೆಗೆ, 18-10-98 ರಿಂದ 12-11-98 ರವರೆಗೆ, 02-01-99 ರಿಂದ 27-01-99 ರವರೆಗೆ, 17-05-99 ರಿಂದ 22-06-99 ರವರೆಗೆ, 28-01-00 ರಿಂದ 18-02-00 ರವರೆಗೆ, 07-03-00 ರಿಂದ 17-03-00 ರವರೆಗೆ, 09-01-00 ರಿಂದ 19-01-00 ರವರೆಗೆ, 07-04-00 ರಿಂದ 29-04-00 ರವರೆಗೆ, 04-11-00 ರಿಂದ 13-11-00 ರವರೆಗೆ, 09-01-01 ರಿಂದ 27-02-01 ರವರೆಗೆ, 08-07-94 ರಂದು 17-05-99 ರಂದು 07-04-00 ರಿಂದ 29-04-00 ರವರೆಗೆ, 29-04-00 ರಂದು ಪದೇ ಪದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವ ಮೂಲಕ ನಿಮ್ಮ ನಡತೆಯನ್ನು ಸುಧಾರಿಸಿಕೊಳ್ಳದೆ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿದ್ದು ಅದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:30-03-2002ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉಪ ವಲಯ ಬೆಳಗಾವಿ ಇವರು ಮೇಲ್ಮನವಿಯನ್ನು ಪರಿಶೀಲಿಸಿ, ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:11-12-2003 ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಕ ಮಾಡಿ, ಇವರ ವೇತನವನ್ನು ಪಿಸಿ ಹುದ್ದೆಯ ವೇತನದಲ್ಲಿ ರೂ.3,450-00ಕ್ಕೆ ಮಿತಿಗೊಳಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಹೊಸದಾಗಿ ಪಡೆಯುವಂತೆ ಮತ್ತು ಸೇವೆಯಿಂದ ಹೊರಗೆ ಉಳಿದ ಅವಧಿಯನ್ನು ಸೇವೆಯಿಂದ ಹೊರೆಗೆ ಉಳಿದಂತೆಯೇ ಎಂದು ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರನ್ನು ಗೈರುಹಾಜರಿಯ ಸಂಬಂಧ ಕಡ್ಡಾಯ ನಿವೃತ್ತಿ ಆದೇಶವನ್ನು ಮಾರ್ಪಡಿಸಿ, ಮೇಲ್ಮನವಿ ಪ್ರಾಧಿಕಾರಿ ಸೇವೆಯಲ್ಲಿ ಪುನರ್ ನೇಮಕ ಮಾಡಿದ್ದರೂ ಸಹ, ಪುನ: ಪದೇ ಪದೇ ಗೈರುಹಾಜರಿ ಆಗಿರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಶಿಸ್ತು ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ, ಮೇಲ್ಮನವಿ ಪ್ರಾಧಿಕಾರಿ ಸೇವೆಯಲ್ಲಿ ಪುನರ್ ನೇಮಕ ಮಾಡಿರುವ ಕಾರಣ ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 54 ಪೊಸಿಅ 2005 ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಆರ್.ವಡ್ಡರ ಸಿಪಿಸಿ 575, ಬಿಜಾಪೂರ ಜಿಲ್ಲೆ, ಇವರು ಸರ್ಕಾರಕ್ಕೆ ದಿನಾಂಕ:20-01-05 ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 1379

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎನ್.ನರಸಿಂಹಯ್ಯ, ಪಿಸಿ 92, 3ನೇ ಪಡೆ ಕೆಎಸ್‌ಆರ್‌ಪಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ ಕೆಎಸ್‌ಆರ್‌ಪಿ ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ/4/ಡಿಇ-57, 2002-03 ಓಬಿ ನಂ 54/2003. ದಿನಾಂಕ:16-06-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/12/2003-04. ದಿನಾಂಕ:05-04-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25-05-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/41/2004. ದಿನಾಂಕ:25-09-2004.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: PSC/84/CNS/2005. ದಿನಾಂಕ: 29-08-2005.

**ಪ್ರಸ್ತಾವನೆ:**

ಶ್ರೀ ಎನ್. ನರಸಿಂಹಯ್ಯ ಪಿಸಿ 92, 3ನೇ ಪಡೆ ಕೆಎಸ್‌ಆರ್‌ಪಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ಎನ್.ನರಸಿಂಹಯ್ಯ, ಪೇದೆ ಸಂಖ್ಯೆ:92 ಬಿ ದಳ, 3ನೇ ಪಡೆ, ಕೆಎಸ್‌ಆರ್‌ಪಿ ಬೆಂಗಳೂರು ಆದ ನೀವು 3ನೇ ಪಡೆಯ ಕೆಲವು ಸಿಬ್ಬಂದಿಗಳಿಗೆ ತ್ಯಾಗರಾಜ ಕೋ-ಆಪರೇಟಿವ್ ಬ್ಯಾಂಕ್, ಎಸ್.ಆರ್.ಕಾಲೋನಿ ಹಾಗೂ ಹನುಮಂತ ನಗರ ಶಾಖೆಗಳಿಂದ ಸಾಲ ಕೊಡಿಸಲು ಸಿಬ್ಬಂದಿಯವರಿಂದ ರೂ.5,000 ರಿಂದ 10,000ರವರೆಗೆ ಲಂಚವನ್ನು ಪಡೆದುಕೊಂಡಿರುವುದಲ್ಲದೆ ಅವರ ವೇತನ ಚೀಟಿಗಳನ್ನು ಪಡೆದು ಬಿ ದಳದ ಆರ್‌ಪಿಐ ಕಛೇರಿ ಮುದ್ರೆಯನ್ನು ಕದ್ದು ಪೋರ್ಜರಿ ಸಹಿ ಮಾಡಿ ಮುದ್ರೆಯನ್ನು ದುರುಪಯೋಗ ಮಾಡಿ, ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ದುರ್ನಡತೆ, ಅಶಿಸ್ತು, ಕರ್ತವ್ಯಲೋಪ ಹಾಗೂ ಬೇಜವಾಬ್ದಾರಿಯನ್ನು ತೋರಿಸಿರುವಿರೆಂಬುವುದು ನಿಮ್ಮ ಮೇಲಿನ ಆರೋಪವಾಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ ಕೆಎಸ್‌ಆರ್‌ಪಿ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:16-06-2003ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಹಾಲಿ ನೇಮಕಾತಿ ಹೊಂದುವ ಪಿಸಿ ಹುದ್ದೆಯ ಕನಿಷ್ಟ ವೇತನಕ್ಕೆ ವಾರ್ಷಿಕ ವೇತನ ಬಡ್ತಿ ಇಲ್ಲದಂತೆ, ಈ ಆದೇಶದ ದಿನಾಂಕದಿಂದ ನಿವೃತ್ತಿ ಹೊಂದುವವರೆಗೆ ನಿಗದಿಪಡಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್‌ಆರ್‌ಪಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:05-04-04 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪಗಳು ಬಹಳ ಗಂಭೀರ ಸ್ವರೂಪದ್ದಾಗಿದ್ದು, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಸಮಂಜಸವಾಗಿದ್ದರೂ, ಕೆ.ಸಿ.ಎಸ್.ಆರ್.ನ ನಿಯಮ 59(ಬಿ) ರನ್ವಯ ತಾಂತ್ರಿಕ ದೋಷವುಳ್ಳದಾಗಿರುತ್ತದೆ. ಆದ್ದರಿಂದ ಅರ್ಜಿದಾರರು ಎಸಗಿರುವ ಆರೋಪಗಳ ಗಂಭೀರತೆಯನ್ನು ಪರಿಗಣಿಸಿ, ಹಾಗೂ ದೋಷಪೂರಿತ ದಂಡನಾದೇಶವನ್ನು ಗಮನದಲ್ಲಿಟ್ಟುಕೊಂಡು, ಶಿಸ್ತು ಪ್ರಾಧಿಕಾರಿಯ ದಿನಾಂಕ:16-06-2003ರ ಆದೇಶವನ್ನು ಭಾಗಶ: ಮಾರ್ಪಡಿಸಿ, ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ 10 (ಹತ್ತು) ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತವಾಗಿ (With cummulative effect) ಇಳಿಸಿ, ಈ ಹತ್ತು ವರ್ಷಗಳ ದಂಡನಾ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಗಳಿಗೆ ಅರ್ಹರಿರುವುದಿಲ್ಲವೆಂದು, ಯಾವುದೇ ಪದೋನ್ನತಿಗೆ ಅರ್ಹರಿರುವುದಿಲ್ಲವೆಂದೂ, ದಂಡನಾ ಅವಧಿ ಹತ್ತು ವರ್ಷಗಳ ನಂತರ, ಅರ್ಜಿದಾರರು ಆದೇಶದ ಹಿಂದಿನ ದಿನ ಯಾವ ವೇತನ ಪಡೆಯುತ್ತಿದ್ದರೋ, ಅದೇ ವೇತನ ಶ್ರೇಣಿಯ ಅದೇ ವೇತನ ಹಂತಕ್ಕೆ ವೇತನವನ್ನು ಮರು ನಿಗದಿಗೊಳಿಸಲು ಸರ್ಕಾರವು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ:5 ರಲ್ಲಿ ಓದಲಾದ ದಿನಾಂಕ:29-08-2005ರ ಪತ್ರದಲ್ಲಿ, ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ 10 (ಹತ್ತು)

ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತವಾಗಿ (with Cummulative effect) ಇಳಿಸಿ, ಈ ದಂಡನಾ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿಗಳಿಗೆ ಪದೋನ್ನತಿಗೆ ಅರ್ಹರಿರುವುದಿಲ್ಲವೆಂದು, ದಂಡನಾ ಅವಧಿಯ ಹತ್ತು ವರ್ಷಗಳ ನಂತರ ಅವರು ಶಿಸ್ತು ಪ್ರಾಧಿಕಾರಿ ಆದೇಶದ ಹಿಂದಿನ ದಿನ ಯಾವ ವೇತನವನ್ನು ಪಡೆಯುತ್ತಿದ್ದರೋ ಅದೇ ವೇತನ ಶ್ರೇಣಿಯ ಅದೇ ವೇತನ ಹಂತಕ್ಕೆ ವೇತನವನ್ನು ಮರು ನಿಗದಿಗೊಳಿಸಲು ಸಹಮತಿ ನೀಡಿದೆ. ಅದರನ್ವಯ ಸರ್ಕಾರವು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಿಅ 2004 ಬೆಂಗಳೂರು ದಿನಾಂಕ: 23ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:16-06-2003ರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಎಸ್.ನರಸಿಂಹಯ್ಯ ಪಿ.ಸಿ 92 `ಬಿ` ದಳ 3ನೇ ಪಡೆ, ಕೆಎಸ್‌ಆರ್‌ಪಿ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:25-05-2004 ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, 1) ಅವರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ 10 (ಹತ್ತು) ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತವಾಗಿ (with cummulative effect) ಇಳಿಸಿ, ಈ ದಂಡನಾ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿಗಳಿಗೆ, ಪದೋನ್ನತಿಗೆ ಅರ್ಹರಿರುವುದಿಲ್ಲವೆಂದೂ, ದಂಡನಾವಧಿಯ ಹತ್ತು ವರ್ಷಗಳ ನಂತರ ಅವರು ಆದೇಶದ ಹಿಂದಿನ ದಿನ ಯಾವ ವೇತನವನ್ನು ಪಡೆಯುತ್ತಿದ್ದರೋ ಅದೇ ವೇತನ ಶ್ರೇಣಿಯ ಅದೇ ವೇತನ ಹಂತಕ್ಕೆ ವೇತನವನ್ನು ಮರು ನಿಗದಿಗೊಳಿಸಿದೆ. 2) ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:29-08-2005ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 1380

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕರ್ನಾಟಕ ನಾಗರೀಕ ಸೇವೆಗಳು (ಗ್ರಾಮೀಣ ಕೃಪಾಂಕ ದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು 2003ರ ಅನ್ವಯ ಮರು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂಕಇ 53 ರಾಪಸಿ 98 ದಿನಾಂಕ: 26–3–2001
2) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 45 ಸೆನೆನಿ 2003 ದಿನಾಂಕ:2–7–2003
3) ಸರ್ಕಾರದ ಆದೇಶ ಸಂಖ್ಯೆ: ಸಂಕಇ 36 ರಾಪಸಿ 2003 ದಿನಾಂಕ: 20–10–2003
4) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 58 ಎಸ್.ಆರ್. ಆರ್. 2003, ದಿನಾಂಕ: 12–11–2003.
5) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 171/ಸೆನೆನಿ 2003 ದಿನಾಂಕ: 27–6–2005.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ಕರ್ನಾಟಕ ನಾಗರೀಕ ಸೇವೆಗಳು (ನೇರ ನೇಮಕಾತಿ ಮೂಲಕ ಆಯ್ಕೆ) ನಿಯಮಗಳು 1973ರ ನಿಯಮ 7ರ ಅನ್ವಯ ದಿನಾಂಕ: 6–8–1998ರ ಅಧಿಸೂಚನೆ ಸಂಖ್ಯೆ: ಪಿ.ಎಸ್.ಸಿ 2 ಆರ್.ಟಿ.ಬಿ. 97 ರಲ್ಲಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿ ಪ್ರಕಟಿಸಿರುವ ಶ್ರೀ.ರಮೇಶ್. ಎಲ್. ಪಾಟೀಲ್ ಇವರನ್ನು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯ ರೀತ್ಯಾ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 6000–11200 ರ ಗ್ರಂಥ ಪಾಲಕರ ಹುದ್ದೆಗೆ ಪರೀಕ್ಷಾರ್ಥಿಯಾಗಿ ನೇಮಕ ಮಾಡಲಾಗಿತ್ತು. ಸರ್ವೋಚ್ಛ ನ್ಯಾಯಾಲಯದ ದಿನಾಂಕ:6–5–2003ರ ತೀರ್ಪಿನಂತೆ ರಾಜ್ಯ ಪತ್ರಾಗಾರ ಇಲಾಖೆಯ ಸೇವೆಗೆ ಸೇರಿದ ಗ್ರಾಮೀಣ ಕೃಪಾಂಕ ಸೌಲಭ್ಯವನ್ನು ಪಡೆದಿದ್ದ '' ಗ್ರಾಮೀಣ ಕೃಪಾಂಕ ರಹಿತ '' ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಕಳೆದುಕೊಂಡಿದ್ದ, ಶ್ರೀ.ರಮೇಶ್.ಎಲ್. ಪಾಟೀಲ್, ಗ್ರಂಥಪಾಲಕ ಇವರನ್ನು ಮೇಲೆ(2)ರಲ್ಲಿ ಓದಲಾದ ಸುತ್ತೋಲೆಯ ಮಾರ್ಗದರ್ಶನದಂತೆ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದ ಪ್ರಕಾರ ಸೇವೆಯಿಂದ ಕಾರ್ಯ ವಿಮುಕ್ತಿ ಮಾಡಲಾಗಿತ್ತು.

ಈ ರೀತಿ ಸೇವೆಯಿಂದ ತೆಗೆದು ಹಾಕಲ್ಪಟ್ಟ ಗ್ರಾಮೀಣಾ ಕೃಪಾಂಕದ ಅಭ್ಯರ್ಥಿಗಳನ್ನು ಮರು ನೇಮಕಾತಿ ಮಾಡಲು ಮೇಲೆ (4)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ (ವಿಶೇಷ) ನಿಯಮಗಳು 2003 ನ್ನು ದಿನಾಂಕ:12.11.2003 ರಿಂದ ಜಾರಿಗೊಳಿಸಲಾಗಿತ್ತು. ಆದರೆ ಶ್ರೀ.ಮೋಹನ್ ಕೆ.ಎನ್. ಮತ್ತು ಇತರರು ಶ್ರೀ.ಕಿರಣ್ ವಿಷ್ಣು ಕಾಂಬ್ಳೆ ಮತ್ತು ಇತರರು ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಸಲ್ಲಿಸಿದ ರಿಟ್ ಅರ್ಜಿಗಳ ಸಂಖ್ಯೆ: 536/2003 ಹಾಗೂ 562/2003 ರಲ್ಲಿ ಮೇಲ್ಕಂಡ ವಿಶೇಷ ನಿಯಮಗಳ ಸಿಂಧುತ್ವವನ್ನು ಪ್ರಶ್ನಿಸಿದ್ದರು. ಮಾನ್ಯ ಸರ್ವೋಚ್ಛ ನ್ಯಾಯಾಲಯವು ದಿನಾಂಕ:12.12.2003 ರಂದು ಮೇಲ್ಕಂಡ ರಿಟ್ ಅರ್ಜಿಗಳಲ್ಲಿ ನೀಡಿದ ಮಧ್ಯಂತರ ಆದೇಶದಲ್ಲಿ ಈ ನಿಯಮಗಳನ್ವಯ ಯಾವುದೇ ನೇಮಕಾತಿ ಮಾಡದಂತೆ ತಡೆಯಾಜ್ಞೆ ನೀಡಿತ್ತು. ಅದರನ್ವಯ ದಿನಾಂಕ:23–12–2003ರ ಸುತ್ತೋಲೆ ಸಂಖ್ಯೆ: ಸಿಆಸುಇ 171 ಸೆನನಿ 2003 ರಲ್ಲಿ ಮೇಲ್ಕಂಡ ವಿಶೇಷ ನಿಯಮಗಳಡಿ ಮುಂದಿನ ಆದೇಶದವರೆಗೆ ಯಾವುದೇ ನೇಮಕಾತಿಯನ್ನು ಮಾಡಬಾರದೆಂದು ಎಲ್ಲಾ ನೇಮಕಾತಿ ಪ್ರಾಧಿಕಾರಿಗಳಿಗೆ ಸೂಚನೆ ನೀಡಲಾಗಿತ್ತು. ಸದರಿ ಅಧಿಸೂಚನೆಗೆ ಸರ್ವೋಚ್ಛ ನ್ಯಾಯಾಲಯವು ದಿನಾಂಕ: 12–12–2003 ರಿಂದ ತಡೆಯಾಜ್ಞೆ ನೀಡಿದ್ದ ಕಾರಣ ಶ್ರೀ.ರಮೇಶ್ ಎಲ್. ಪಾಟೀಲ್‌ನ್ನು ರಾಜ್ಯ ಪತ್ರಾಗಾರ ಇಲಾಖೆಯ ಗ್ರಂಥಪಾಲಕರ ಗ್ರೂಪ್ ' ಬಿ ' ಹುದ್ದೆಗೆ ನೇಮಕಾತಿ ಮಾಡಿರಲಿಲ್ಲ.

ದಿನಾಂಕ: 17–12–2004ರ ತನ್ನ ಆದೇಶದಲ್ಲಿ ಸರ್ವೋಚ್ಛ ನ್ಯಾಯಾಲಯವು ಮೇಲ್ಕಂಡ ಎಲ್ಲಾ ಪ್ರಕರಣಗಳನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ವರ್ಗಾಯಿಸಿತು.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಸರ್ವೋಚ್ಛ ನ್ಯಾಯಾಲಯದಿಂದ ವರ್ಗಾವಣೆಗೊಂಡ ಮೇಲ್ಕಂಡ ಪ್ರಕರಣಗಳನ್ನು ಅರ್ಜಿ ಸಂಖ್ಯೆ: 975/05, 977/05 ಮತ್ತು 979/05 ಎಂದು ಮರು ಸಂಖ್ಯೆಗೊಳಿಸಿ, ದಿನಾಂಕ:8–6–2005ರ ತನ್ನ ಆದೇಶದಲ್ಲಿ ಪ್ರಕರಣಗಳನ್ನು

ವಿಲೇವಾರಿ ಮಾಡಿದೆ. ಪರಿಣಾಮವಾಗಿ ಸರ್ವೋಚ್ಚ ನ್ಯಾಯಾಲಯವು ಈ ಪ್ರಕರಣಗಳಲ್ಲಿ ಮೇಲ್ಕಂಡ ನಿಯಮಗಳನ್ನು ಜಾರಿಗೊಳಿಸದಂತೆ ದಿನಾಂಕ: 12.12.2003 ರಂದು ನೀಡಿದ್ದ ತಡೆಯಾಜ್ಞೆಯನ್ನು ತೆರವುಗೊಳಿಸಿದಂತಾಗಿದೆ.

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮೇಲ್ಕಂಡ ಆದೇಶದ ಹಿನ್ನಲೆಯಲ್ಲಿ ದಿನಾಂಕ:11–11–1998ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿ. ಗ್ರಾಮೀಣ ಕೃಪಾಂಕರಹಿತವಾಗಿ ಆಯ್ಕೆ ಪಟ್ಟಿ ತಯಾರಿಸಿದಾಗ ಅದರಲ್ಲಿ ಸ್ಥಾನ ಪಡೆಯಲಾಗದೆ ಸೇವೆಯಿಂದ ತೆಗೆದುಹಾಕಲ್ಪಟ್ಟ ಗ್ರಾಮೀಣ ಕೃಪಾಂಕದ ಅಭ್ಯರ್ಥಿಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು 2003ರನ್ವಯ ಮರು ನೇಮಕಾತಿ ಮಾಡುವ ಪ್ರಕ್ರಿಯೆಯನ್ನು ಮುಂದುವರಿಸಬಹುದೆಂದು ಮೇಲೆ 5ರಲ್ಲಿ ಓದಲಾದ ದಿನಾಂಕ:20–7–2005 ರ ಸುತ್ತೋಲೆಯಲ್ಲಿ ನೇಮಕಾತಿ ಪ್ರಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಈ ಹಿನ್ನಲೆಯಲ್ಲಿ ಶ್ರೀ.ರಮೇಶ್. ಎಲ್.ಪಾಟೀಲ್ ಇವರನ್ನು ರಾಜ್ಯ ಪತ್ರಾಗಾರ ಇಲಾಖೆಯ ಗ್ರಂಥಪಾಲಕರ ಗ್ರೂಪ್– ಬಿ ಹುದ್ದೆಗೆ ಮರು ನೇಮಕ ಮಾಡಲು ಸರ್ಕಾರ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 22 ರಾಪಸಿ 2005, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಾಮಾವಳಿಗಳ ಅನುಸಾರ , ಶ್ರೀ. ರಮೇಶ್ .ಎಲ್. ಪಾಟೀಲ್, ಇವರನ್ನು ರಾಜ್ಯ ಪತ್ರಾಗಾರ ಇಲಾಖೆಯ ಸೇವೆಯ ಗ್ರೂಪ್ 'ಬಿ' ವೇತನ ಶ್ರೇಣಿ ರೂ. 6000–11200ರ ಗ್ರಂಥಾಪಾಲಕರ ಹುದ್ದೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮರು ನೇಮಕ ಮಾಡಿದೆ.

(1) ಈ ಆದೇಶದ ದಿನಾಂಕದಿಂದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(2) ಇವರ ವೇತನವನ್ನು ಗ್ರಂಥಪಾಲರ ಹುದ್ದೆಯ ವೇತನಶ್ರೇಣಿ ರೂ.6000–11200 ರಲ್ಲಿ ಕನಿಷ್ಠ ಮೂಲ ವೇತನವನ್ನು ನಿಗದಿ ಪಡಿಸಲಾಗುವುದು.

(3) ಮರು ನೇಮಕಗೊಳ್ಳುವ ಮುನ್ನ ಇವರು ಸಲ್ಲಿಸಿರುವ ಸೇವೆಯನ್ನು ಕೇವಲ ರಜೆ ಮತ್ತು ಪಿಂಚಣಿಗಾಗಿ ಮಾತ್ರ ಪರಿಗಣಿಸಲಾಗುವುದು. ಆದರೆ ವೇತನ ನಿಗದಿ ಮತ್ತು ಜೇಷ್ಠತೆಗೆ ಪರಿಗಣಿಸಲಾಗುವುದಿಲ್ಲ.

(4) ಕರ್ನಾಟಕ ನಾಗರೀಕ ಸೇವಾ, ನಿಮಯಗಳು, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (ಕರ್ನಾಟಕ ಅಧಿನಿಯಮ 14/1990) ರಡಿ ರಚಿಸಲಾದ ಇಲ್ಲದೆ ರಚಿಸಿದವೆಂದು ಭಾವಿಸಲಾದ ಸರ್ಕಾರಿ ನೌಕರರ ಸೇವಾ ಷರತ್ತುಗಳನ್ನು ನಿಯಂತ್ರಿಸಲ್ಪಡುವ ಇನ್ನಿತರ ನಿಯಮಗಳು ಇವರಿಗೆ ಅನ್ವಯಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1221 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ. (ಆಡಳಿತ ಕನ್ನಡ)

**ತಿದ್ದೋಲೆ**

**ಸಂಖ್ಯೆ: ಸಂಕಇ 215 ಕರಅ 2004, ಬೆಂಗಳೂರು, ದಿನಾಂಕ: 28ನೇ ಜೂನ್ 2005**

ದಿನಾಂಕ: 16.7.1993ರ ಆದೇಶ ಸಂಖ್ಯೆ: ವಾಪ್ರಯು 37 ಕರಅ 93 ರಲ್ಲಿನ ಕ್ರಮ ಸಂಖ್ಯೆ 1 ರಲ್ಲಿನ ಅಧಿಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಎಂಬುದರ ಬದಲಾಗಿ ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಹಾಗೂ ಕ್ರಮ ಸಂಖ್ಯೆ: 2 ರಲ್ಲಿರುವ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ, ಬೆಂಗಳೂರು ಎಂಬುದರ ಬದಲಾಗಿ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಸಂಸ್ಕೃತಿ), ಬೆಂಗಳೂರು ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1266 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## SOCIAL WELFARE SECRETARIAT

**Subject:** Appointment of Sri Syed Ghousuddin as Khazi of Afzalpur - orders - regarding.

**Read:** Government Order No. RD 57 WES 2002, dated: 20.01.2003.

**PREAMBLE:**

Government appointed one Sri Khazi Liyakat as Khazi of Afzalpur Tq. Gulbarga Dist. vide Govt. Order No.RD 57 WES 2002, dated: 20.01.2003 read above. The said appointment order was challenged in the Hon'ble High Court of Karnataka by one Sri Syed Ghousuddin S/o Late Syed Osman vide W.P.No.10204/03. The Hon'ble Court was pleased to quash the Government Order dated 20.01.2003 and the matter of appointment of Khazi of Afzalpur Tq. was remitted back to Government. Accordingly, both the parties were given fair and free opportunity to represent themselves. Government after hearing both the parties and after verification of records produced by them has come to conclusion that Sri Syed Ghousuddin is the right choice to be appointed as Khazi of Afzalpur, Accordingly this order:

**GOVERNMENT ORDER No. SWD 02 WLM 2003, Bangalore, Dated: 21st October 2005**

In exercise of powers conferred under Khazi Act, 1880, Government is pleased to withdraw the appointment of Sri Khazi Liyakat as Khazi of Afzalpur vide Government order No.RD 57 WES 2003, dated 20.01.2003.

Government is also pleased to appoint Sri Syed Ghousuddin S/o Late Syed Osman as Khazi of Afzalpur Tq. with its surrounding villages as reflected in the Annexure to Government Order No. RD 57 WES 2003, dated: 20.1.2003 until further orders.

By Order and in the Name of the Governor of Karnataka,

**K. RAHAMATHULLA**

Under Secretary to Government,

Social Welfare Department, (Minority Welfare Wakfs).

**ANNEXURE TO GOVERNMENT ORDER No. SWD 02 WLM 2003, Bangalore,**

**Dated: 21st October 2005**

**List of villages comes under Afzalpur Tq.**

| Afzalpur Circle | | Atnoor Circle | | Karagji Circle | |
|---|---|---|---|---|---|
| 1. | Afzalpur | 1. | Atnoor | 1. | Allagi B |
| 2. | Arjungi | 2. | Ankalga | 2. | Allagi K |
| 3. | Anoor | 3. | Aurad | 3. | Bankalga |
| 4. | Badal | 4. | Avralli | 4. | Ballondgi |
| 5. | Badnalli | 5. | Bannadaiwada | 5. | Bhosaga |
| 6. | Dallurgi | 6. | Bhiramadgi | 6. | Diggi |
| 7. | Batagere | 7. | Babnalli | 7. | Diksang |
| 8. | Bannahatti | 8. | Sidnnur | 8. | Duddangi |
| 9. | Bilwad B | 9. | Bhoganahalli | 9. | Hiriyal |
| 10. | Bilwad-K | 10. | Chinnangara | 10. | Jewargi B |
| 11. | Chincholi | 11. | Chowdapur | 11. | Jewargi K |
| 12. | Guddawadi | 12. | Chinmalli | 12. | Karagji |
| 13. | Ghattarga | 13. | Devalkhangapur | 13. | Kudignoor |
| 14. | Gour-B | 14. | Bikasanga B. | 14. | Mangalore |
| 15. | Korke | 15. | Dennur | 15. | Mashal |
| 16. | Chollur | 16. | Gobbur B | 16. | Mannur |
| 17. | Halliyal | 17. | Gabbur K. | 17. | Nadarga |
| 18. | Havalga | 18. | Gudur | 18. | Shivoor |
| 19. | Ingalke (K) | 19. | Hasargundi | 19. | Sirawal |
| 20. | Hinchagra | 20. | Goudgoan | 20. | Sonna |
| 21. | Kualli | 21. | Havnoor | 21. | Telluni |
| 22. | Keraknalli | 22. | Huvinnklli | 22. | Udchan |
| 23. | Kallur | 23. | Ingalgi B | | |
| 24. | Kollnoor | 24. | Kehkarsadlgi | | |
| 25. | Kesapur | 25. | Kognur | | |
| 26. | Mallabad | 26. | Karbhosaga | | |
| 27. | Matolli | 27. | Kirsalgi | | |
| 28. | Revoorbi | 28. | Madara K | | |
| 29. | Revoorbi K | 29. | Madara B | | |
| 30. | Shivapur | 30. | Niloor | | |
| 31. | Tellur | 31. | Sagnoor | | |
| | | 32. | Sirasgi | | |
| | | 33. | Sindgur | | |
| | | 34. | Takli | | |
| | | 35. | Tegghalli | | |
| | | 36. | Umerga | | |
| | | 37. | Voddarhalli | | |
| **Total 90 Villaged** | | | | | |

**K. RAHAMATHULLA**

Under Secretary to Government,

P.R. 1428

Social Welfare Department, (Minority Welfare Wakfs).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಟಿಪ್ಪುಸುಲ್ತಾನ್ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಸಂಸ್ಥೆಯನ್ನು ಮೈಸೂರಿನಲ್ಲಿ ಸ್ಥಾಪಿಸುವ ಬಗ್ಗೆ – ಅನುದಾನ ಬಿಡುಗಡೆ ಕುರಿತು

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 105 ಕೆಎಂಯು 2003 ದಿ: 31–3–2004

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರ ಪತ್ರ ಕ್ರಮಾಂಕ ಡಿಎಎಂ/ಸಂವಿ/ದ:ವ:ಮೈಸೂರು:ವಸಂ/ಕ/2005–06 ದಿನಾಂಕ 16–6–2005

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಮೈಸೂರಿನ ವಸ್ತು ಪ್ರದರ್ಶನದ ಆವರಣದಲ್ಲಿ ಕರ್ನಾಟಕ ಭೂಸೇನಾ ನಿಗಮ ನಿಯಮಿತ ಇವರ ವತಿಯಿಂದ ನಿರ್ಮಾಣವಾಗುತ್ತಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ಕಟ್ಟಡ ಕಾಮಗಾರಿಗೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರಿಗೆ ರೂ.65.00 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ, ಮೈಸೂರಿನ ವಸ್ತು ಪ್ರದರ್ಶನದ ಪ್ರಾಧಿಕಾರದ ಆವರಣದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಕಟ್ಟಡ ನಿರ್ಮಾಣ ಕಾರ್ಯವು ಕರ್ನಾಟಕ ಭೂಸೇನಾ ನಿಗಮ ನಿಯಮಿತ ಇವರ ವತಿಯಿಂದ ನಿರ್ಮಿಸಲಾಗುತ್ತಿದೆ. ಇಲಾಖೆಯ ಕಟ್ಟಡದ ಕಾಮಗಾರಿಯು ಪ್ರಗತಿಯಲ್ಲಿರುವುದರಿಂದ ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4202–04–800–1–01–139 ಪ್ರಧಾನ ಕಾಮಗಾರಿಗಳು (ಯೋಜನೆ) ಅಡಿಯಲ್ಲಿ ರೂ.25.00 ಲಕ್ಷವನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತರವರಿಗೆ ಬಿಡುಗಡೆ ಮಾಡಲು ಮಂಜೂರಾತಿ ಆದೇಶವನ್ನು ನೀಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರು ಕೋರಿರುತ್ತಾರೆ. ಈ ಅನುದಾನವು ವಸ್ತು ಸಂಗ್ರಹಾಲಯ ಕಟ್ಟಡದ ಗ್ಯಾಲರಿಗಳ ಗ್ರಿಡ್ ಬೀಂಗೆ ತಗಲುವ ಹೆಚ್ಚುವರಿ ವೆಚ್ಚ ಹಾಗೂ ಸಂಗ್ರಹಾಲಯ ಕಟ್ಟಡದ ಒಳ ವಿದ್ಯುತ್ತೀಕರಣದ ಕಾಮಗಾರಿ ಹಾಗೂ ವಿದ್ಯುತ್ ಪರಿವರ್ತಿತ ಅಳವಡಿಸಲು ತಗಲುವ ಅಂದಾಜು ವೆಚ್ಚಗಳಿಗೆ ಸಂಬಂಧಿಸಿರುತ್ತದೆ ಎಂದು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರು ತಿಳಿಸಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ದಿ: 16–6–2005ರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 242 ಕೆಎಂಯು 2004 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೈಸೂರು ನಗರದ ವಸ್ತುಪ್ರದರ್ಶನದ ಪ್ರಾಧಿಕಾರದ ಆವರಣದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಅಪೂರ್ಣಗೊಂಡಿರುವ ಕಟ್ಟಡವನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತ ವತಿಯಿಂದ ಪೂರ್ಣಗೊಳಿಸಿ, ಟಿಪ್ಪುಸುಲ್ತಾನ್ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಸಂಸ್ಥೆ ಸ್ಥಾಪಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು ಇವರಿಗೆ ರೂ.25.00ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷ ಮಾತ್ರ) ಆಡಳಿತಾತ್ಮಕ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202–04–800–1–01–139 ಪ್ರಧಾನ ಕಾಮಗಾರಿ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10–7–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1381 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Renewal of lease of 0.40 ha. of forest land in Forest Sy. No.285 of Achwe Village in Honnavar Division in favour of Mahila Mandal, Achwe.

**Read:**
1. Letter No.F(C)A/11.1/89/KAR/1970 dated 30.12.2002 of Ministry of Environment and Forests, Government of India, Regional Office (S.Z) Bangalore.
2. Government Order No. FEE 307 FGL 2002, dated: 27.03.2005.
3. Letter No. A5(2) GFL.CR-3/2002-03, dated of 14.7.2005 Principal Chief Conservator of Forests, Bangalore.

**PREAMBLE:**

Government accorded approval for renewal of lease of 0.40 ha. of forest land in Ft. Sy.No.285 of Achwe Village, Ankola Taluk in Honnavar division in favour of Mahila Mandal, Achwe for a period of 15 years w.e.f. 14.9.1995 in the Government order read at (2) above.

As per condition No.4 and 6 of the order, the user agency has to pay the compensatory afforestation charges and the Net Present Value of the forestland.

Principal Chief Conservator of Forests has informed that user agency has expressed its inability to pay the above charges and it is ready to hand over the forest land. The Deputy Conservator of Forests, Honnavar Division has taken back the forest land and Principal Chief Conservator of Forests has requested to withdraw the Government Order vide letter read at (3) above. Hence the order.

**GOVERNMENT ORDER No. FEE 139 FLL 2005, Bangalore, Dated: 5th September 2005**

In the circumstances explained in the preamble, Government here by withdraw the approval accorded for renewal of lease of 0.40 ha. of forest land in Ft. Sy.No. 285 of Achwe Village in Honnavar Division in favour of Mahila Mandal, Achwe in G.O.No. FEE 307 FGL 2002, dated: 27.3.2004.

By Order and in the Name of the Governor of Karnataka,

**S.R. VATSALA**

P.R. 1268

Under Secretary to Government,

Forest, Ecology and Environment Department.

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಅರಣ್ಯ ಭೂಮಿಯನ್ನು ಗುರ್ತಿಸಲು ಹಾಗೂ ಅತಿಕ್ರಮಣವಾಗಿರುವ ಪ್ರದೇಶವು ಅರಣ್ಯ ಭೂಮಿಯೇ ಅಥವಾ ಕಂದಾಯ ಭೂಮಿಯೇ ಎಂಬುದನ್ನು ಪರಿಶೀಲಿಸಲು ಜಿಲ್ಲಾ ಮಟ್ಟದ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಇಇ 5 ಎಫ್‌ಜಿಎಲ್ 90, ದಿನಾಂಕ: 5.5.1997.
2. ಜಿಲ್ಲಾಧಿಕಾರಿಗಳಿಗೆ ವಿಳಾಸಿಸಿರುವ ಮುಖ್ಯ ಕಾರ್ಯದರ್ಶಿಯವರ ಅರೆ ಸರ್ಕಾರಿ ಪತ್ರ ಸಂಖ್ಯೆ ಅಪಜೀ 173 ಎಫ್‌ಜಿಎಲ್ 2005, ದಿನಾಂಕ: 24.8.2005.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ದಿನಾಂಕ: 27.4.1978 ಕ್ಕಿಂತ ಹಿಂದಿನ ಅರಣ್ಯ ಜಮೀನಿನ ಅತಿಕ್ರಮಣದ ಪ್ರಕರಣಗಳ ಬಗ್ಗೆ ಪರಿಶೀಲಿಸಿ ಅರಣ್ಯ ಜಮೀನನ್ನು ಅರಣ್ಯ (ಸಂರಕ್ಷಣಾ) ಕಾಯ್ದೆ 1980 ರಡಿಯಲ್ಲಿ ಸೂಚಿಸಿರುವಂತೆ ಭಾರತ ಸರ್ಕಾರದ ಅನುಮತಿಯನ್ನು ಪಡೆದು ಸಕ್ರಮಗೊಳಿಸಲು ಆದೇಶಿಸಲಾಗಿತ್ತು. ಭಾರತ ಸರ್ಕಾರದ ಅನುಮೋದನೆಯನ್ನು ಪಡೆದು 1978 ಕ್ಕಿಂತ ಪೂರ್ವದಲ್ಲಿ ಆದ 19,348 ಪ್ರಕರಣಗಳಲ್ಲಿ 14,848.83 ಹೆಕ್ಟೇರ್ ಅರಣ್ಯ ಒತ್ತುವರಿಗಳನ್ನು ಸಕ್ರಮಗೊಳಿಸಲಾಗುತ್ತಿದೆ. 1978 ಕ್ಕಿಂತ ಪೂರ್ವದಲ್ಲಿ ಆಗಿರುವ ಕೆಲವು ಬಿಟ್ಟುಹೋದ ಅರ್ಹ ಅರಣ್ಯ ಒತ್ತುವರಿಗಳಿಗೆ ಸಂಬಂಧಪಟ್ಟಂತೆ ಹಾಗೂ ದಿನಾಂಕ: 27.4.1978 ರಿಂದ ದಿನಾಂಕ: 24.10.1980 ರವರೆಗೆ ಆಗಿರುವ ಅರಣ್ಯ ಒತ್ತುವರಿಗಳಿಗೆ ಸಂಬಂಧಪಟ್ಟಂತೆ ಕೇಂದ್ರ ಸರ್ಕಾರದ ಅನುಮೋದನೆಯನ್ನು ಪಡೆದು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಬೇಕಾಗಿದೆ. ಈ ಸಂದರ್ಭದಲ್ಲಿ ಅರಣ್ಯ ಭೂಮಿ/ಕಂದಾಯ ಭೂಮಿಯಲ್ಲಿನ ಅತಿಕ್ರಮಣದಾರರು, ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಯನ್ನು ಸಲ್ಲಿಸಿದ್ದು, ಇವರು ಅತಿಕ್ರಮಿಸಿರುವ ಭೂಮಿಯು ಅರಣ್ಯ ಭೂಮಿಯೇ ಅಥವಾ ಕಂದಾಯ ಪ್ರದೇಶವೇ ಎಂಬ ಬಗ್ಗೆ ಪರಿಶೀಲಿಸಲು ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಲು ಉದ್ದೇಶಿಸಿದೆ. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಸಮಿತಿಯು ಸ್ಥಳೀಯ ಸರ್ವೆ ನಡೆಸಿ ಭೂಮಿಯ ಸ್ವರೂಪದ ಬಗ್ಗೆ ನಿರ್ಣಯವನ್ನು ಕೈಗೊಳ್ಳಬೇಕಾಗಿದೆ. ಆದ್ದರಿಂದ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 173 ಎಫ್‌ಜಿಎಲ್ 2005, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2005**

ರಾಜ್ಯದ ಜಿಲ್ಲೆಗಳಲ್ಲಿ ಅತಿಕ್ರಮಣದಾರರಿಂದ ಒತ್ತುವರಿಯಾಗಿರುವ ಪ್ರದೇಶವು ಅರಣ್ಯ ಭೂಮಿಯೇ ಅಥವಾ ಕಂದಾಯ ಪ್ರದೇಶವೇ ಎಂಬ ಬಗ್ಗೆ ಗುರ್ತಿಸಿ ನಿರ್ಣಯಿಸಲು ಕೆಳಕಂಡ ಸದಸ್ಯರನ್ನೊಳಗೊಂಡ ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1) | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2) | ಸಂಬಂಧಪಟ್ಟ ಜಿಲ್ಲಾ ಉಪ ಅರಣ್ಯ ಸಂರಕ್ಷಣಾಧಿಕಾರಿ | ಸದಸ್ಯರು |
| 3) | ಸಹಾಯಕ ಕಮಿಷನರ್ ಜಿಲ್ಲೆಯ ಉಪ ವಿಭಾಗ | ಸದಸ್ಯರು |
| 4) | ಸಂಬಂಧಪಟ್ಟ ಜಿಲ್ಲೆಯ ತಹಶೀಲ್ದಾರರು | ಸದಸ್ಯರು |
| 5) | ಕೇಂದ್ರ ಸ್ಥಾನದ ಉಪ ಅರಣ್ಯ ಸಂರಕ್ಷಣಾಧಿಕಾರಿ | ಸದಸ್ಯ ಕಾರ್ಯದರ್ಶಿ |

ಸಮಿತಿಯು ಸಂಘಟಿಸಿದ 15 ದಿವಸಗಳೊಳಗೆ ಸಭೆ ಸೇರತಕ್ಕದ್ದು. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಿ ಸ್ಥಳ ಪರಿವೀಕ್ಷಣೆ ನಡೆಸಿ ಅವಶ್ಯಕತೆ ಇದ್ದಲ್ಲಿ ಸ್ಥಳೀಯ ಸರ್ವೆ ನಡೆಸಿ, ಅತಿಕ್ರಮಣದಾರರು ಅತಿಕ್ರಮಿಸಿರುವ ಭೂಮಿಯು ಅರಣ್ಯ ಪ್ರದೇಶವೇ ಅಥವಾ ಕಂದಾಯ ಪ್ರದೇಶವೇ ಎಂಬ ಬಗ್ಗೆ ನಿರ್ಣಯಿಸತಕ್ಕದ್ದು. ಈ ರೀತಿ ನಿರ್ಣಯಿಸಿದ ನಂತರ ಅತಿಕ್ರಮಣದಾರರು ಸಕ್ರಮೀಕರಣಕ್ಕೆ ಅರ್ಹತೆ ಅಥವಾ ಇಲ್ಲವೆ ಎಂಬ ಬಗ್ಗೆ ಸೂಕ್ತ ನಿರ್ಣಯ ತೆಗೆದುಕೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಸರ್ವೋಚ್ಚ ನ್ಯಾಯಾಲಯದಲ್ಲಿ ಈ ದಿಕ್ಕಿನಲ್ಲಿ ಪ್ರಮಾಣಪತ್ರವನ್ನು ಸಲ್ಲಿಸಬೇಕಾಗಿರುವುದರಿಂದ ಈ ಸಮಿತಿಯು ರಚನೆಯಾದ 60 ದಿನಗಳೊಳಗೆ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 1269

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಪಿಡಿ 60 ಎಸ್‌ಎಂಸಿ 2004, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿ 60 ಎಸ್‌ಎಂಸಿ 2004, ದಿನಾಂಕ: 29.8.2005 ರಲ್ಲಿನ ಭಾಗ-1ರ ಕ್ರಮ ಸಂಖ್ಯೆ 9 ಮತ್ತು 33 ರಲ್ಲಿನ

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಈಗ ಕಾರ್ಯನಿರ್ವಹಿಸುತ್ತಿರುವ ಕಛೇರಿ/ಇಲಾಖೆ ಹೆಸರು | ಸಹಾಯಕ ನಿರ್ದೇಶಕರ ಹುದ್ದೆಯ ಪ್ರಭಾರ ವಹಿಸಲು ಸೂಚಿಸಿರುವ ಹುದ್ದೆ/ಇಲಾಖೆ |
|---|---|---|
| 9 | ಎಂ. ನಾಗಭೂಷಣ,<br>ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿತ್ರದುರ್ಗ. | ಪ್ರಾದೇಶಿಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್,<br>ಚಿತ್ರದುರ್ಗ. |
| 33 | ಶಂಪೇಶಂಕರ್ (ಪ.ಜಾ.)<br>ಜಿಲ್ಲಾ ಕ್ಷಯ ನಿಯಂತ್ರಣ ಕಛೇರಿ, ಬೀದರ್. | ಪ್ರಾದೇಶಿಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್,<br>ಹಾವೇರಿ. |

| "ಎಂಬುದಕ್ಕೆ ಬದಲಾಗಿ" | | |
|---|---|---|
| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಈಗ ಕಾರ್ಯನಿರ್ವಹಿಸುತ್ತಿರುವ ಕಛೇರಿ/ಇಲಾಖೆ ಹೆಸರು | ಸಹಾಯಕ ನಿರ್ದೇಶಕರ ಹುದ್ದೆಯ ಪ್ರಭಾರ ವಹಿಸಲು ಸೂಚಿಸಿರುವ ಹುದ್ದೆ/ಇಲಾಖೆ |
| 9 | ಎಂ. ನಾಗಭೂಷಣ,<br>ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿತ್ರದುರ್ಗ. | ಸಾಂಖ್ಯಿಕ ಅಧಿಕಾರಿ, ಜಿಲ್ಲಾ ಪಂಚಾಯತ್,<br>ಚಿತ್ರದುರ್ಗ. |
| 33 | ಶಂಪೇಶಂಕರ್ (ಪ.ಜಾ.)<br>ಜಿಲ್ಲಾ ಕ್ಷಯ ನಿಯಂತ್ರಣ ಕಛೇರಿ, ಬೀದರ್. | ಸಾಂಖ್ಯಿಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ. |

ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಹೆಚ್. ಸೇಠ್**

ಪಿ.ಆರ್. 1270 ಸರ್ಕಾರದ ಅಪರ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ತಿದ್ದುಪಡಿ**

**ಸಂಖ್ಯೆ: ಪಿಡಿ 112 ಎಸ್ಎಸ್ಎಂ 2005(ಭಾಗ), ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿ 112 ಎಸ್ಎಸ್ಎಂ 2005, ದಿನಾಂಕ: 18.08.2005ರ ಆದೇಶದಲ್ಲಿನ ಕ್ರಮ ಸಂಖ್ಯೆ: (1) ಅನ್ನು "ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು"

"ಶ್ರೀ ಕೆ.ವಿ. ಸುಬ್ರಮಣ್ಯಂ, ಜಂಟಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರನ್ನು ಶ್ರೀ ಜಯದೇವಪ್ರಕಾಶ್, ಜಂಟಿ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವಶಕ್ಕೆ ನೀಡಲಾಗಿದೆ."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಹೆಚ್. ಸೇಠ್**

ಪಿ.ಆರ್. 1272 ಸರ್ಕಾರದ ಅಪರ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ವಿಷಯ:** 2005-06ನೇ ಸಾಲಿನ ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿಯ ಕ್ರಿಯಾ ಯೋಜನೆಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ: ಬಪ್ರಮಂ/ತಾಂ-1/ಕ್ರಿ.ಯೋ/2005-06, ದಿನಾಂಕ: 05.07.2005.

**ಪ್ರಸ್ತಾವನೆ:**

ಕಾರ್ಯದರ್ಶಿ ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರು ಮೇಲೆ ಓದಲಾದ ಪತ್ರದಲ್ಲಿ ಮಂಡಳಿಯ 2005-06ನೇ ಸಾಲಿನ ಕ್ರಿಯಾ ಯೋಜನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. 2005-06ನೇ ಸಾಲಿನಲ್ಲಿ ಮಂಡಳಿಗೆ ಆಯವ್ಯಯದಲ್ಲಿ ರೂ.630.00 ಲಕ್ಷಗಳನ್ನು ಒದಗಿಸಲಾಗಿದೆ. ಜೊತೆಗೆ 1.4.2005ರ ಆರಂಭಿಕ ಶಿಲ್ಕು ರೂ.25.90 ಲಕ್ಷಗಳ ಅನುದಾನ ಲಭ್ಯವಿದ್ದು ಒಟ್ಟಾರೆ 2005-06ನೇ ಸಾಲಿನಲ್ಲಿ ಒಟ್ಟು ಲಭ್ಯವಿರುವ ಮೊತ್ತ ರೂ.655.90 ಗಳ ಮೊತ್ತಕ್ಕೆ ಕ್ರಿಯಾ ಯೋಜನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. 2005-06ನೇ ಸಾಲಿಗೆ ರೂ.592.90 ಲಕ್ಷದ ಕ್ರಿಯಾ ಯೋಜನೆಯನ್ನು ಸರ್ಕಾರವು ಅಂಗೀಕರಿಸಲು ಪರಿಗಣಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 66 ಪಿಟಿಪಿ 2005, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2005**

ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ ಅಧಿನಿಯಮ 1994ರ ವಿಧಿ 27ರ ಪ್ರಕಾರ ಸರ್ಕಾರಕ್ಕೆ ನೀಡಿರುವ ಅಧಿಕಾರದಡಿಯಲ್ಲಿ ಮಂಡಳಿಯ 2005-06ನೇ ಸಾಲಿನಲ್ಲಿ ರೂ.592.90 ಲಕ್ಷದ ಕ್ರಿಯಾಯೋಜನೆಗೆ ಸರ್ಕಾರವು ಅನುಮೋದನೆ ನೀಡಿದೆ.

| | | (ರೂ.ಲಕ್ಷಗಳಲ್ಲಿ) |
|---|---|---|
| 1) | ಮಂಡಳಿಯ ಮುಂದುವರಿದ ಕಾಮಗಾರಿಗಳಿಗೆ | ರೂ. 268.71 |
| 2) | ಮಂಡಳಿಯ ನಬಾರ್ಡ್ ಕಾಮಗಾರಿಗಳಿಗೆ | ರೂ. 249.19 |
| 3) | ಆಡಳಿತಾತ್ಮಕ ವೆಚ್ಚ | ರೂ. 75.00 |
| | | **ರೂ. 592.90** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಲಿಂಗಯ್ಯ**

ಪಿ.ಆರ್. 1277 ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,

ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಸೇರ್ಪಡೆ ಆದೇಶ**

**ಸಂಖ್ಯೆ: ಮಮಇ 184 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2005**

ಅಧಿಸೂಚನೆ ಸಂಖ್ಯೆ: ಮಮಇ 177 ಎಸ್‌ಜೆಡಿ 1999 ದಿನಾಂಕ: 17.12.2002ರ 6ನೇ ಸಾಲಿನಲ್ಲಿ "ದಿನಾಂಕ: 10.8.1999 ರಿಂದ" ಎಂಬ ಪದಗಳ ನಂತರ ಈ ಕೆಳಗಿನಂತೆ ಸೇರಿಸಿ ಓದಿಕೊಳ್ಳತಕ್ಕದ್ದು:

"ಕರ್ನಾಟಕ ನಾಗರೀಕ ಸೇವಾ ಮುಂಬಡ್ತಿ ವೇತನ ಮತ್ತು ನಿವೃತ್ತಿ ನಿಯಮಗಳು 1978ರ ನಿಯಮ 2ರ ಉಪನಿಯಮ (1) (ಎ) ರನ್ವಯ"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 1278 ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆಕುಕ 331 ಪಿಟಿಡಿ 2005, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 46 ಪಿಟಿಡಿ 2004, ದಿನಾಂಕ: 18.2.2005 ರಲ್ಲಿ ಮೂರನೇ ಸಾಲಿನ ವೇತನ ಶ್ರೇಣಿಯಲ್ಲಿ ಇದರ ಮುಂದೆ "ಪ್ರಾಂಶುಪಾಲರ ಹುದ್ದೆಗೆ ಸ್ಥಾನಪನ್ನ ಪದೋನ್ನತಿಯನ್ನು ನೀಡಿ" ಎಂಬ ವಾಕ್ಯವನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭಾಕರ್ ಎಂ. ಶೇಟ್**

ಪಿ.ಆರ್. 1279 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ENERGY SECRETARIAT

**Subject:** Transfer of 2.5 M.W. Wind Power Capacity in favour of M/s Vandana Ispat Ltd.-Orders relating to.

**Read:**
1. Government order No: DE 26 NCE 1999, dated: 13.5.1999.
2. Government order No: EN 190 NCE 2005, dated: 18.8.2005.
3. Letter No. KRED/08/VIL/2005/1632, dated: 2.9.2005 received from the Managing Director, Karnataka Renewable Energy Development Limited Bangalore.

**PREAMBLE:**

In the Government Order dated: 18.8.2005 read at (2) above, sanction has been accorded for implementation of 2.5 M.W. capacity Wind Power Project at Kurumardikere village, Chitradurga District to M/s Suzlon Developers Limited (Now M/s Suzlon Infrastructure Limited).

Now, the Managing Director, Karnataka Renewable Energy Development Limited, Bangalore in his letter dated: 2.9.2005 read at (3) above, has recommended to the Government for transfer of 2.5 M.W. Wind Power capacity in favour of M/s. Vandana Ispat Ltd. from out of sanctioned 2.5 MW Wind Power Capacity at Kurumardikere village, Chitradurga District of M/s Suzlon Infrastructure Limited.

The proposal has been examined and pass the following order:

**GOVERNMENT ORDER No. EN 254 NCE 2005, Bangalore, Dated: 8/9th September 2005**

Government is pleased to accord sanction for transfer of 2.5 M.W. Wind Power capacity in favour of M/s Vandana Ispat Ltd. from out of sanctioned 2.5 MW Wind Power Capacity at Kurumardikere village, Chitradurga District of M/s Suzlon Infrastructure Limited. The terms and conditions of the Government Order read at (1) above, shall IPSO FACTO applicable.

By Order and in the Name of the Governor of Karnataka,

**SURESH B. KRISHNAPPANAVAR**

P.R. 1281 Under Secretary to Government, Energy Department.

## ಇಂಧನ ಸಚಿವಾಲಯ

**ವಿಷಯ:** ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ M/s Suzlon Developers Limited ಎಂಬ ಕಂಪನಿಯ ಹೆಸರನ್ನು M/s. Suzlon Infrastructure Limited ಆಗಿ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** M/s Suzlon Developers Limited, ಬೆಂಗಳೂರು ಇವರ ಪತ್ರ ದಿನಾಂಕ: 18.8.2005.

**ಪ್ರಸ್ತಾವನೆ:**

ಓದಲಾದ ಪತ್ರದಲ್ಲಿ M/s Suzlon Developers Limited, ಬೆಂಗಳೂರು ಇವರು ಆಡಳಿತ ವ್ಯವಹಾರಗಳ ನಿಟ್ಟಿನಲ್ಲಿ ಆ ಕಂಪನಿಯ ಹೆಸರನ್ನು M/s Suzlon Infrastructure Limited ಎಂದು 1966ರ ಕಂಪನಿಯ ಕಾಯ್ದೆ (1956ರ ಕಾಯ್ದೆ) ಅನುಚ್ಛೇದ 26 ರನ್ವಯ ಪುಣೆ, ಮಹಾರಾಷ್ಟ್ರದಲ್ಲಿ ಮಾರ್ಪಡಿಸಿಕೊಂಡಿದ್ದು ತತ್‌ಪರಿಣಾಮವಾಗಿ ಕಂಪನಿಯು ನಡೆಸುವ ವ್ಯವಹಾರಗಳು M/s Suzlon Infrastructure Limited ಹೆಸರಿನಲ್ಲಿ ನಡೆಸಲಾಗುವುದರಿಂದ ಸದರಿ ಕಂಪನಿಗೆ ಹಂಚಿಕೆಯಾಗಿರುವ ವಿವಿಧ ಪವನ ವಿದ್ಯುತ್ ಯೋಜನೆಗಳನ್ನು M/s Suzlon Developers Limited ಮತ್ತು M/s Suzlon Developers Privite Limited ಹೆಸರಿನಲ್ಲಿ ಹಂಚಿಕೆ ಮಾಡಿರುವುದರಿಂದ ಕಂಪನಿಯ ಹೆಸರಿನ ಬದಲಾವಣೆಯ ಬಗ್ಗೆ ಇಂಧನ ಇಲಾಖೆಯ ವತಿಯಿಂದ ಈ ಬಗ್ಗೆ ಅಧಿಕೃತ ಆದೇಶವನ್ನು ಹೊರಡಿಸಲು ಕೋರಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2005, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2005**

M/s Suzlon Developers Limited ಮತ್ತು M/s Suzlon Developers Privite Limited ಕಂಪನಿಗೆ ರಾಜ್ಯದಲ್ಲಿ ಹಂಚಿಕೆ ಆಗಿರುವ ವಿವಿಧ ಪವನ ವಿದ್ಯುತ್ ಯೋಜನೆಗಳನ್ನು ಅನುಷ್ಠಾನ ಮಾಡಲು ಆ ಕಂಪನಿ ಹೆಸರು ಮಾರ್ಪಾಟಾಗಿರುವ ಕಾರಣ **M/s Suzlon Infrastructure Limited** ಎಂಬ ಹೆಸರಿನಲ್ಲಿ ವ್ಯವಹರಿಸಲು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1282 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ವೃತ್ತಿ ಶಿಕ್ಷಣ ಇಲಾಖೆ 2005-06ನೇ ಸಾಲಿಗೆ ರೂ.2.22 ಲಕ್ಷಗಳನ್ನು ಪುನರ್ ವಿನಿಯೋಗ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ ಅವರ ಪ್ರಸ್ತಾವನೆ ಸಂಖ್ಯೆ: ಡಿವಿಇ/ಲೆಪವಿ/ಬಿ1/ಪುನರ್‌ವಿನಿಯೋಗ/19/2005-06, ದಿನಾಂಕ: 18.7.2005.

**ಪ್ರಸ್ತಾವನೆ:**

ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 18.7.2005ರ ತಮ್ಮ ಪ್ರಸ್ತಾವನೆಯಲ್ಲಿ 2005-06ನೇ ಸಾಲಿಗೆ ಇಲಾಖೆಗೆ ಯೋಜನೇತರ ಲೆಕ್ಕ ಶೀರ್ಷಿಕೆ 2202-02-800-4-00 ರಲ್ಲಿ ರೂ.617.95 ಲಕ್ಷ ಅನುದಾನ ಮಂಜೂರಾತಿ ಆಗಿದ್ದು 31.5.2005ರ ಅಂತ್ಯದ ಅಂಕಿಅಂಶಗಳಿಂದಾಗಿ ಈ ಸಾಲಿಗೆ ರೂ.347.43 ಲಕ್ಷ ಬೇಡಿಕೆಯಾಗಿದ್ದು ರೂ.270.52 ಲಕ್ಷಗಳು ಉಳಿಕೆ ಆಗುವ ಸಂಭವ ಇರುವುದರಿಂದ ಸಂಭವಿಸಬಹುದಾದ ಉಳಿಕೆ ಮೊಬಲಗು ರೂ.276.82 ಲಕ್ಷಗಳಲ್ಲಿ ಆಬ್ಜೆಕ್ಟೀವ್ ಕೋಡ್ (041) ಪ್ರಯಾಣ ವೆಚ್ಚಗಳು ಇದರಲ್ಲಿ ಕಂಡು ಬರುವ ಕೊರತೆ ರೂ.1.20 ಲಕ್ಷಗಳನ್ನು ಪುನರ್ ವಿನಿಯೋಗಿಸಲು ಸರ್ಕಾರದ ಅನುಮೋದನೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 301 ಯೋಯೋಕ 2005, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2005**

ವೃತ್ತಿ ಶಿಕ್ಷಣ ಇಲಾಖೆಗೆ 2005-06ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202-02-800-4-00 ಯೋಜನೇತರ ಅಡಿಯಲ್ಲಿ ರೂ.617.95 ಲಕ್ಷ ರೂ.ಗಳ ಅನುದಾನ ಬಿಡುಗಡೆಯಾಗಿದ್ದು ಪರಿಷ್ಕೃತ ಲೆಕ್ಕಾಚಾರದಂತೆ ಬೇಡಿಕೆ ರೂ.347.43 ಲಕ್ಷಗಳಾದ ಕಾರಣ ರೂ.270.52 ಲಕ್ಷ ಉಳಿಕೆಯಾಗುವ ಸಂಭವದಿಂದಾಗಿ ಸರ್ಕಾರವು ಕೊರತೆಯಾಗಿರುವ (ಆಬ್ಜೆಕ್ಟೀವ್ ಕೋಡ್-071 ನಲ್ಲಿ) ರೂ.2.22 ಲಕ್ಷ ರೂ.ಗಳ ಪುನರ್ ವಿನಿಯೋಗಕ್ಕೆ ಈ ಮೂಲಕ ಅನುಮೋದನೆ ನೀಡುತ್ತದೆ.

ಸರ್ಕಾರಿ ಸುತ್ತೋಲೆ ಸಂಖ್ಯೆ: ಆಇ 3 ಟಿಎಫ್‌ಸಿ 2005, ದಿನಾಂಕ: 28.6.2005 ರಲ್ಲಿ ಪ್ರದತ್ತವಾದ ಅಧಿಕಾರಗಳನ್ವಯ ಹಾಗೂ ಸದರಿ ಆದೇಶದ ನಿಬಂಧನೆಗೆ ಒಳಪಟ್ಟು ಈ ಅನುಮೋದನೆ ನೀಡಿದೆ.

ಶಿಕ್ಷಣ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ.ಸಂಖ್ಯೆ: ಇಡಿ 511 ಐಎಫ್(ಬಿಎ) 2005, ದಿನಾಂಕ: 3.8.2005 ರಲ್ಲಿ ಸಹಮತಿ ಪಡೆದು ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1283 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವನ್ನು ಶ್ರೀ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಎಂದು ಪುನರ್ ನಾಮಕರಣ ಮಾಡುವ ಕುರಿತು.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕಹಿನಿ/ಸ/24/ಅರಸು/2005-06, ದಿನಾಂಕ: 21.7.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು, ದಿನಾಂಕ: 4.7.2005 ರಂದು ದಿವಂಗತ ಡಿ. ದೇವರಾಜ ಅರಸುರವರ 90ನೇ ಜನ್ಮ ದಿನಾಚರಣೆಯ ಪೂರ್ವಭಾವಿ ಸಭೆಯನ್ನು ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆಸಲಾಗಿದೆ ಎಂದು ಹಾಗೂ ಆ ಸಭೆಯನ್ನು ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಹೆಸರನ್ನು ಶ್ರೀ ಡಿ. ದೇವರಾಜ ಅರಸು ಅಭಿವೃದ್ಧಿ ನಿಗಮ ಎಂದು ಪುನರ್ ನಾಮಕರಣಗೊಳಿಸಲು ತೀರ್ಮಾನಿಸಲಾಗಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ.

ಹಿಂದುಳಿದ ವರ್ಗಗಳ ಉದ್ಧಾರಕ್ಕಾಗಿ ಪ್ರಾಮಾಣಿಕ ಪ್ರಯತ್ನ ಮಾಡಿದ ಹಿಂದುಳಿದ ವರ್ಗಗಳ ನೌಕರರಾಗಿ ಕರ್ನಾಟಕದ ಆಗಿನ ಮುಖ್ಯ ಮಂತ್ರಿಗಳಾಗಿದ್ದ ದಿವಂಗತ ಡಿ. ದೇವರಾಜ ಅರಸುರವರ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವನ್ನು 28.10.1977 ರಲ್ಲಿ ವಿದ್ಯುಕ್ತವಾಗಿ ಸ್ಥಾಪಿಸಿರುತ್ತಾರೆ. ಹಿಂದುಳಿದ ವರ್ಗಗಳ ಜನರ ಅಭಿವೃದ್ಧಿಗಾಗಿ ಇವರು ಶ್ರಮಿಸಿದ ಸೇವೆಯನ್ನು ಸ್ಮರಿಸಿ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದ ಹೆಸರನ್ನು ಶ್ರೀ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಎಂದು ನಾಮಕರಣ ಮಾಡಿ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 21.07.2005ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 349 ಬಿಎಂಎಸ್ 2005, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ 2005**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು "ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ" ಸಂಸ್ಥೆಯ ಹೆಸರನ್ನು "ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ" ಎಂದು ಮರು ನಾಮಕರಣ ಮಾಡಿ ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್. 1284 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಮಲ್ಲಿಕಾರ್ಜುನ ರಾಮಪ್ಪ ರೆಡ್ಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಿಜಾಪುರ ಇವರ ಟ್ರ್ಯಾಪ್ ಪ್ರಕರಣ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಮಮಇ 258 ಎಸ್‌ಜೆಡಿ 2000, ದಿನಾಂಕ: 8.11.2000.
2) ಇದೇ ಸಮ ಸಂಖ್ಯೆಯ ಆದೇಶ ಸಂಖ್ಯೆ: ದಿನಾಂಕ: 21.5.2001.
3) ಸರ್ಕಾರಿ ಆದೇಶ ಸಂಖ್ಯೆ: ಮಮಇ 258 ಎಸ್‌ಜೆಡಿ 2000, ದಿನಾಂಕ: 26.6.2001.
4) ಸಂಖ್ಯೆ: ಎನ್‌ಓಕೆ/ಎಆರ್‌ಇ-3/ಇಎನ್‌ಕ್ಯೂ-11/2003-04, ದಿನಾಂಕ: 15.3.2005.

**ಪ್ರಸ್ತಾವನೆ:**

ಶ್ರೀ ಮಲ್ಲಿಕಾರ್ಜುನ ರಾಮಪ್ಪ ರೆಡ್ಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಿಜಾಪುರ, ಇವರು ಶ್ರೀಮತಿ ಮಹಾದೇವಿ ಕೋಂ ಬೆನ್ನಪ್ಪ ಕನ್ನೂರು ದರ್ಗಾ ಹಳ್ಳಿ, ಬಿಜಾಪುರ ತಾ: ಬಿಜಾಪುರ ಜಿಲ್ಲೆ, ಇವರನ್ನು ದರ್ಗಾ ಅಂಗನವಾಡಿ ಕೇಂದ್ರದಲ್ಲಿ ಸಹಾಯಕಿಯಾಗಿ ಮುಂದುವರೆಸಲು ರೂ.4,000-00 ಗಳನ್ನು ಲಂಚವನ್ನು ಡಿಮ್ಯಾಂಡ್ ಮಾಡಿ ಲಂಚವನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತವು ದಿನಾಂಕ: 5.9.2000 ರಂದು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದಾರೆ ಎಂದು ಅಡಿಷನಲ್ ಜನರಲ್ ಆಫ್ ಪೊಲೀಸ್, ಕರ್ನಾಟಕ ಲೋಕಾಯುಕ್ತ ರವರು ಸರ್ಕಾರಕ್ಕೆ ಕಳುಹಿಸಿದ ವರದಿಯ ಆಧಾರದ ಮೇಲೆ ಶ್ರೀ ಮಲ್ಲಿಕಾರ್ಜುನ ರಾಮಪ್ಪರೆಡ್ಡಿ ರವರನ್ನು ಮೇಲೆ ಓದಲಾದ ಕ್ರ.ಸಂ.(1) ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿಯಿಟ್ಟು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ.(2) ರಲ್ಲಿ ಶ್ರೀ ಮಲ್ಲಿಕಾರ್ಜುನ ರಾಮಪ್ಪರೆಡ್ಡಿ ರವರನ್ನು ವಿಚಾರಣೆ ಬಾಕಿಯಿಟ್ಟು ಷಹಪುರದ ಶಿಶು ಅಭಿವೃದ್ಧಿ ಯೋಜನಾಧಿಕಾರಿಯಾಗಿ ಸೇವೆಗೆ ಪುನರ್ ಸ್ಥಾಪಿಸಲಾಗಿದೆ. ಹಾಗೂ ಕ್ರ.ಸಂ.(3) ರಲ್ಲಿ ಓದಲಾದ ದಿನಾಂಕದ ಆದೇಶದಲ್ಲಿ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ 7,13(1) (ಡಿ) ಜೊತೆಯಲ್ಲಿ ಓದಲಾದ ಕಾಲಂ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಆದೇಶಿಸಲಾಗಿದೆ.

ಕ್ರ.ಸಂ. (4) ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತದಿಂದ ಬಂದ ಅಂತಿಮ ಲೋಕಾಯುಕ್ತ ವಿಚಾರಣೆಯಲ್ಲಿ ನೀಡಿರುವ ವರದಿ ಪ್ರಕಾರ ಶ್ರೀ ಮಲ್ಲಿಕಾರ್ಜುನ ರಾಮಪ್ಪ ರೆಡ್ಡಿ ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಬಿಜಾಪುರ ಇವರು ಶ್ರೀಮತಿ ಮಹಾದೇವಿ ಕೋಂ ಬೆನ್ನಪ್ಪ ಕನ್ನೂರು ಇವರನ್ನು ಅಂಗನವಾಡಿ ಕೇಂದ್ರದಲ್ಲಿ ಸಹಾಯಕಿಯಾಗಿ ಮುಂದುವರೆಸಲು, ರೂ.4,000-00 ಗಳನ್ನು ಲಂಚವನ್ನಾಗಿ ಪಡೆದಿರುವರೆಂಬ ಬಗ್ಗೆ ಸಾಕ್ಷಿ ಆಧಾರಗಳನ್ನು ಪರಿಶೀಲಿಸಿ ನೋಡಿದಾಗ ಅದು ಸುಳ್ಳು ಎಂದು ಕಂಡು ಬರುತ್ತದೆ ಎಂದು ತಿಳಿಸಿ ಈ ಪ್ರಕರಣವನ್ನು ಮುಕ್ತಾಯಗೊಳಿಸಲು ವರದಿಸಿರುತ್ತಾರೆ.

ಆದ್ದರಿಂದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 258 ಎಸ್‌ಜೆಡಿ 2000, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2005**

ಶ್ರೀ ಮಲ್ಲಿಕಾರ್ಜುನ ರಾಮಪ್ಪ ರೆಡ್ಡಿ ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಬಿಜಾಪುರ ಇವರು ಈ ಹಿಂದೆ ಬಿಜಾಪುರದಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಶ್ರೀಮತಿ ಮಹಾದೇವಿ ಅಂಗನವಾಡಿ ಸಹಾಯಕಿ, ಅಂಗನವಾಡಿ ಕೇಂದ್ರ ದರ್ಗಾ ಗ್ರಾಮ ಇವರನ್ನು ಅವರ ಕೆಲಸದಲ್ಲಿ ಮುಂದುವರೆಯಲು ರೂ.4,000-00 ಗಳನ್ನು ಅಕ್ರಮ ಸಂಭಾವನೆಯಾಗಿ ಲಂಚ ಕೇಳಿದ್ದರೆಂಬ ಪ್ರಕರಣದಲ್ಲಿ ನಡೆಸಿದ ಇಲಾಖಾ ವಿಚಾರಣೆಯ ಅಂತಿಮ ನಿರ್ಣಯದ ಪ್ರಕಾರ ಶ್ರೀ ಮಲ್ಲಿಕಾರ್ಜುನ ರಾಮಪ್ಪ ರೆಡ್ಡಿಯವರನ್ನು ಈ ಆರೋಪದಿಂದ ಮುಕ್ತಗೊಳಿಸಿ ನಿರ್ದೋಷಿಯೆಂದು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 1285 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## EDUCATION SECRETARIAT

**Subject:** Centrally sponsored Scheme of IEDC-implementation in the State of Karnataka during 2002-03 release of 3rd instalment-issue of revised orders according approval-reg.

**Read:** 1) Letter No.14-94/2002, IE dated: 9.3.2004 from the Secretary to Government of India, MHRD, Department of Secondary and Higher Education, New Delhi.
2) G.O.No. ED 195 YOSAKA 2002 dated: 19.8.2004.
3) Letter No. MCI/IED/Grants/4/2004-2005 dated: 3.5.2005 from the Director, Urdu and Other Minority Languages Institution, Department of Public Instruction, Bangalore.

**PREAMBLE:**

In their letter dated 9.3.2004 read at (1) above, Government of India released total amount of Rs.1,24,70,483/- (one crore twenty four lakh seventy thousand four hundred and eighty three rupees) only towards payment of teacher salary in respect of IEDC in Karnataka for the year 2002-03. The same was released vide Government Order dated 19.8.2004 read at (2) above through the Director, Urdu and Other

Minority Languages Institutions, Department of Public Instruction. However the release of amount in respect of following NGOs was heldup by the Director pending inspection:-

| | | |
|---|---|---|
| 1. | Jagadguru Guru Siddeshwara Vidya samste, Guleda gudda, Bagalkote District. | Rs. 3,31,655 |
| 2. | Shri Malteshwara Vidya samste Gadag, | Rs. 1,45,608 |
| 3. | Vishvamanava Jivana Vikasa Sanga, Gottigere, Bangalore | Rs. 1,06,200 |
| 4. | Adarsha Shikshana samste Bellary | Rs.1,74,220 |
| | **Total** | **Rs.7,57,683** |

The Director Urdu and Other Minority Languages Institutions, Bangalore vide his letter dated 3.5.2005 read at (3) above has requested to renew the amount for the year 2005-06. On examination of this proposal it is observed that amount could not be utilized during 2004-05 and the scheme of IEDC is transferred to district sector from the financial year 2005-06 and orders as follows:

**ORDER No. ED 267 YOSAKA 2005, Bangalore, Dated: 8th August 2005**
**(ED 35 SWIMARA (Unique) 2005, dated: 8.8.2005)**

Sanction is accorded to release Rs.7,57,683 (seven lakh fifty seven thousand six hundred and eighty three Rupees) only as balance payment of 3rd installment in respect of the following 4 NGOs towards the expenditure on implementation of CSS of IEDC in the State during the year 2002-03 as payment of teachers salary:-

| | | |
|---|---|---|
| 1. | Jagadguru Guru Siddeshwara Vidya samste, Guleda gudda, Bagalkote District- Through Zilla Panchayat, Bangalore | Rs. 3,31,655 |
| 2. | Shri Malteshwara Vidya samste Gadag-Through Zilla Panchayat, Gadag. | Rs. 1,45,608 |
| 3. | Vishvamanava Jivana Vikasa Sanga, Gottigere, Bangalore-Through Zilla panchayat, Bangalore Urban. | Rs. 1,06,200 |
| 4. | Adarsha Shikshana samste Bellary-Through Zilla Panchayat, Bellary | Rs.1,74,220 |
| | **Total** | **Rs.7,57,683** |

Respective Zilla panchayats will take action to release the amount on the basis of the inspection reports already submitted by the concerned DIET principals shown against each organization in their Jurisdiction out of the amount provided in the link document.

The expenditure on this account shall be debitable to head of account 2202-80-196-1-02.

The Chief Accounts Officers of respective Zilla panchayats shall debit the head of account on the bill and get the accounts transferred to Zilla panchayat fund account-I by means of TTRS in the respective treasuries.

This order issues in confirmation with the Finance Department credit slip No. FD 840 FRC 2004 dated 21.12.2004 and with the concurrence of Internal Financial Adviser, Education Department vide U.O.Note No.ED 492 IF (BA) 2005 dated: 30.7.2005.

By Order and in the Name of the Governor of Karnataka,

**K. SRIKANTESHWARA**

P.R. 1286

Special Officer & Ex-Officio,

Joint Secretary to Government (Planning), Education Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಹಿರಿಯ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರು ಹುದ್ದೆಗಳನ್ನು ಹಿರಿಯ ಹಾಗೂ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್, ಎಂದು ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಎಸ್‌ಆರ್‌ಆರ್: 2:03-04, ದಿನಾಂಕ: 29.03.2004 ಮತ್ತು 30.5.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು, ಕರ್ನಾಟಕ ರಾಜ್ಯ ಸರ್ಕಾರಿ ಪ್ರಯೋಗ ಶಾಲಾ ತಂತ್ರಜ್ಞರ ಕೇಂದ್ರ ಸಂಘ, ಬೆಂಗಳೂರು, ಇವರ ಪತ್ರವನ್ನು ಲಗತ್ತಿಸಿ ಕಳುಹಿಸುತ್ತಾ, ಹಿರಿಯ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳು ವಿವಿಧ ಆಸ್ಪತ್ರೆಗಳಲ್ಲಿ ಹಾಗೂ ಪ್ರಯೋಗಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ವಿವಿಧ ರಾಜ್ಯಗಳಲ್ಲಿ, ಈ ಹುದ್ದೆಯ ಪದನಾಮವನ್ನು ಹಿರಿಯ ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್, ಎಂದು ಸಂಭೋದಿಸುತ್ತಿದ್ದು, ವೈದ್ಯಕೀಯ ಕ್ಷೇತ್ರದಲ್ಲಿ ಬಹು ಪ್ರಾಮುಖ್ಯತೆಯನ್ನು ಪಡೆದಿರುವ ಈ ಹುದ್ದೆಯ ಪದನಾಮಗಳನ್ನು 'ಹಿರಿಯ ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್' ಎಂದು ಮರು ಪದನಾಮಿಕರಿಸುವಂತೆ ಕೋರಿರುತ್ತಾರೆ.

ಕರ್ನಾಟಕ ರಾಜ್ಯದ ನೆರೆಯ ರಾಜ್ಯವಾದ (ವೆಸ್ಟ್ ಬೆಂಗಾಲ್) ಪಶ್ಚಿಮ ಬಂಗಾಳ, ರಾಜ್ಯದಲ್ಲಿ, ಹಿರಿಯ ಹಾಗೂ ಕಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳ ಹುದ್ದೆಗಳನ್ನು ಹಿರಿಯ ಹಾಗೂ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್ ಎಂದು ಕರೆಯುತ್ತಿರುವುದರಿಂದ, ರಾಜ್ಯದಲ್ಲಿನ ಹಿರಿಯ ಹಾಗೂ ಕಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು 'ಹಿರಿಯ ಹಾಗೂ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಜಿಸ್ಟ್' ಎಂದು ಮರು ಪದನಾಮಿಕರಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 287 ಸಿಜಿಇ 2005, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ 'ಹಿರಿಯ ಪ್ರಯೋಗಶಾಲಾ ತಂತ್ರಜ್ಞರು' ಮತ್ತು 'ಕಿರಿಯ ಪ್ರಯೋಗಶಾಲಾ ತಂತ್ರಜ್ಞರು' ಹುದ್ದೆಗಳಿಗೆ ನಿಗದಿಪಡಿಸಿರುವ ವೇತನ ಶ್ರೇಣಿ ರೂ.4150-7800 ಮತ್ತು ರೂ.3850-7050 ರಲ್ಲಿ ಯಾವುದೇ ವ್ಯತ್ಯಾಸವಿಲ್ಲದೇ ಹಾಗೂ ಮುಂದೆ ಹೆಚ್ಚಿನ ವೇತನ ಶ್ರೇಣಿ ನೀಡಲು ಕೋರಿ ಪ್ರಸ್ತಾವನೆ ಸಲ್ಲಿಸಕೂಡದೆಂಬ ಷರತ್ತಿಗೊಳಪಟ್ಟು 'ಹಿರಿಯ ಪ್ರಯೋಗಶಾಲಾ ತಂತ್ರಜ್ಞರು' ಮತ್ತು 'ಕಿರಿಯ ಪ್ರಯೋಗಶಾಲಾ ತಂತ್ರಜ್ಞರು' ಹುದ್ದೆಗಳ ಪದನಾಮವನ್ನು "ಹಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್" ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್" ಎಂದು ಮರು ಪದನಾಮಗೊಳಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಪಿ.ಆರ್. 1408

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ನಡೆದಿದೆ ಎನ್ನಲಾದ ಅಕ್ರಮಗಳ ಬಗ್ಗೆ ಲೋಕಾಯುಕ್ತ ತನಿಖೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 85 ಎಸ್‌ಇಎನ್ 2000, ದಿನಾಂಕ: 30.10.2001.

2) ಲೋಕಾಯುಕ್ತರ ಪತ್ರ ಸಂಖ್ಯೆ: ಲೋಕ್/ಬಿಸಿಡಿ/96/2001-02 ಎಆರ್‌ಇ ದಿನಾಂಕ: 6.7.2005.

**ಪ್ರಸ್ತಾವನೆ:**

ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ಡಾ: ಎಂ. ಬಸಪ್ಪರೆಡ್ಡಿ ಅವರ ವಿರುದ್ಧ ಇಲಾಖೆಯಲ್ಲಿ ಅಪರ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ.ಎ. ಲಾಲ್ ಗೊಂಡರ್ ಅವರು ಮಾಡಿರುವ ಆರೋಪ ಮತ್ತು ಡಾ: ಎಂ. ಬಸಪ್ಪರೆಡ್ಡಿ ಅವರು ಶ್ರೀ ಬಿ.ಎ. ಲಾಲ್‌ಗೊಂಡರ್ ಅವರ ವಿರುದ್ಧ ನೀಡಿರುವ ದೂರಿನಲ್ಲಿ ಕೆಲವೊಂದು ಆರೋಪಗಳನ್ನು ಮಾಡಿರುತ್ತಾರೆ. ಇಂತಹ ಪರಸ್ಪರ ಆಪಾದನೆಗಳನ್ನು ಆಗಿಂದಾಗ್ಗೆ ಮಾಡುತ್ತಲಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ಉಭಯತ್ರರ ದೂರಿನ ಸತ್ಯಾಸತ್ಯತೆಯನ್ನು ತಿಳಿಯಲು, ಮಾನ್ಯ ಲೋಕಾಯುಕ್ತರಿಂದ ತನಿಖೆ ನಡೆಸಿ ವರದಿ ಪಡೆಯುವುದು ಸೂಕ್ತವೆಂದು ನಿರ್ಧರಿಸಿದ ಸರ್ಕಾರವು ಮೇಲೆ (1) ರಲ್ಲಿ ಓದಲಾದ ದಿನಾಂಕ: 30.10.2001ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 7(2)(ಎ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸನ್ಮಾನ್ಯ ಲೋಕಾಯುಕ್ತರಿಂದ ತನಿಖೆ ನಡೆಸಲು ವಹಿಸಿತ್ತು.

ಈ ಬಗ್ಗೆ ಸವಿವರವಾಗಿ ತನಿಖೆ ನಡೆಸಿದ ಲೋಕಾಯುಕ್ತರು ಮೇಲೆ (2) ರಲ್ಲಿ ಓದಲಾದ ದಿನಾಂಕ: 6.7.2005ರ ಪತ್ರದಲ್ಲಿ ಈ ಇಬ್ಬರೂ ಅಧಿಕಾರಿಗಳು ಪರಸ್ಪರ ಮಾಡಿರುವ ದೂರುಗಳಲ್ಲಿ ಯಾವುದೇ ಸತ್ಯಾಂಶವಿಲ್ಲವೆಂದೂ, that the allegations made by these officers against each other are found to have no substance and merit and it is obvious that the allegation had been made against each other out of frustration and not based on merit. The allegations made by Sri. Lalagondar appears to be for reason that the Director is not giving him the importance due to him. ಈ ಇಬ್ಬರೂ ದಿನಾಂಕ: 31.10.2004 ರಂದು ನಿವೃತ್ತರಾಗಿರುವುದರಿಂದ, ಈ ದೂರನ್ನು ಮುಕ್ತಾಯಗೊಳಿಸಲು ಆದೇಶಿಸಿರುತ್ತಾರೆ. ಆದ್ದರಿಂದ ಮಾನ್ಯ ಲೋಕಾಯುಕ್ತರವರ ವರದಿಯನ್ನಾಧರಿಸಿ ಇವರ ವಿರುದ್ಧ ಯಾವುದೇ ಕ್ರಮವಿಲ್ಲದಿರುವುದನ್ನು ಮನಗಂಡ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 85 ಎಸ್‌ಇಎನ್ 2000, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಡಾ: ಬಿ.ಎ. ಲಾಲ್‌ಗೊಂಡರ್, ನಿವೃತ್ತ ಅಪರ ನಿರ್ದೇಶಕರು ಹಾಗೂ ಡಾ: ಎಂ. ಬಸಪ್ಪರೆಡ್ಡಿ, ನಿವೃತ್ತ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ರವರುಗಳ ವಿರುದ್ಧ ಪರಸ್ಪರ ಮಾಡಲಾದ ದೂರುಗಳನ್ನು ಆಧಾರ ರಹಿತವೆಂದು ಪರಿಗಣಿಸಿ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ.

ಈ ತನಿಖೆ ನಡೆಯದಿದ್ದಲ್ಲಿ ಆರೋಪಿತ ಅಧಿಕಾರಿಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1290

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಕಂದಾಯ ಸಚಿವಾಲಯ

**ಆದೇಶ ಸಂಖ್ಯೆ: ಕಂಇ 196 ಮುಸೇವಿ 2004(ಭಾಗ), ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2005**

ಗೋಮಟೇಶ್ವರ ಭಗವಾನ್ ಶ್ರೀ ಬಾಹುಬಲಿ ಮಹಾಮಸ್ತಕಾಭಿಷೇಕ ಮಹೋತ್ಸವ 2006 ಸಮಿತಿ ರಚನೆ ಕುರಿತು ಆದೇಶ ಸಂಖ್ಯೆ: ಕಂಇ 196 ಮುಸೇವಿ 2004, ದಿನಾಂಕ: 12.08.2004ರ ಆದೇಶ ಮತ್ತು ಆದೇಶ ಸಂಖ್ಯೆ: ಕಂಇ 196 ಮುಸೇವಿ 2004 (ಭಾಗ) ದಿನಾಂಕ: 16.12.2004, 11.04.2005 ಮತ್ತು ದಿನಾಂಕ: 21.06.2005 ಗಳಲ್ಲಿ ರಚಿಸಿರುವ ರಾಜ್ಯ ಮಟ್ಟದ ಸಮಿತಿಗೆ ಈ ಕೆಳಕಂಡ ಸದಸ್ಯರುಗಳನ್ನು ಸೇರ್ಪಡೆಗೊಳಿಸಿ, ಆದೇಶಿಸಿದೆ.

**ಕ್ಷೇತ್ರದ ಹಾಗೂ ಸಮಾಜದ ಪ್ರತಿನಿಧಿಗಳು**

22) ಶ್ರೀ ಎಂ.ಎನ್. ರಾಜೇಂದ್ರ ಕುಮಾರ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕ್, ಬೆಂಗಳೂರು.

23) ಶ್ರೀ ಪಾರಸ್‌ಮಲ್ ಸುಖಾನಿ, ನಂ.11-2-7, ಎಂ.ಜಿ. ರಸ್ತೆ, ಮಹಾವೀರ ಚೌಕ್, ರಾಯಚೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 1292

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).